# ಪಿತೃಕರ್ಮ ರಹಸ್ಯ

(ಶ್ರಾದ್ಧ ವಿಚಾರ, ತರ್ಪಣ ಕ್ರಮ, ಆಶೌಚ ವಿವರಗಳೊಂದಿಗೆ)

ಸಂಗ್ರಹ :

**ವಿದ್ವಾನ್ ಡಾ॥ ಹೆಚ್.ಸತ್ಯನಾರಾಯಣಾಚಾರ್ಯ**

ಪ್ರಾಂಶುಪಾಲರು, ಪೂರ್ಣಪ್ರಜ್ಞವಿದ್ಯಾಪೀಠ

**ಶ್ರೀರಾಮವಿಟ್ಠಲಾಚಾರ್ಯ**

ಪ್ರಾಧ್ಯಾಪಕರು, ಪೂರ್ಣಪ್ರಜ್ಞ ವಿದ್ಯಾಪೀಠ

ಪ್ರಕಾಶಕರು

**ವಸುಧಾರಾಮ್ ಪ್ರಿಂಟಿಂಗ್ ಅಂಡ್ ಪಬ್ಲಿಕೇಶನ್ ಹೌಸ್**

ನಂ. 52, ಶ್ರೀ ಲಕ್ಷ್ಮೀವೇಂಕಟೇಶನಿಲಯ, 1ನೇ ಕ್ರಾಸ್,

ಶ್ರೀರಾಮಪುರ, ಬೆಂಗಳೂರು- 560 021. ದೂರವಾಣಿ : 9535869583

# ಪಿತೃಕರ್ಮ ರಹಸ್ಯ

## (ಶ್ರಾದ್ಧ ವಿಚಾರ, ತರ್ಪಣ ಕ್ರಮ, ಆಶೌಚ ವಿವರಗಳೊಂದಿಗೆ)


ಸಂಗ್ರಹ :

**ವಿದ್ವಾನ್ ಡಾ|| ಹೆಚ್.ಸತ್ಯನಾರಾಯಣಾಚಾರ್ಯ**

ಪ್ರಾಂಶುಪಾಲರು, ಪೂರ್ಣಪ್ರಜ್ಞವಿದ್ಯಾಪೀಠ

**ಶ್ರೀರಾಮವಿಟ್ಠಲಾಚಾರ್ಯ**

ಪ್ರಾಧ್ಯಾಪಕರು, ಪೂರ್ಣಪ್ರಜ್ಞ ವಿದ್ಯಾಪೀಠ



ಪ್ರಕಾಶಕರು

**ವಸುಧಾರಾಮ್ ಪ್ರಿಂಟಿಂಗ್ ಅಂಡ್ ಪಬ್ಲಿಕೇಶನ್ ಹೌಸ್**

ನಂ. 52, ಶ್ರೀ ಲಕ್ಷ್ಮೀವೇಂಕಟೇಶನಿಲಯ, 1ನೇ ಕ್ರಾಸ್,

ಶ್ರೀರಾಮಪುರ, ಬೆಂಗಳೂರು- 560 021. **ದೂರವಾಣಿ : 9535869583**

# ಪಿತೃಕರ್ಮ ರಹಸ್ಯ

ಸಂಗ್ರಹ :
**ವಿದ್ವಾನ್ ಡಾ|| ಹೆಚ್.ಸತ್ಯನಾರಾಯಣಾಚಾರ್ಯ**
ಪ್ರಾಂಶುಪಾಲರು, ಪೂರ್ಣಪ್ರಜ್ಞವಿದ್ಯಾಪೀಠ
**ಶ್ರೀ ರಾಮವಿಟ್ಠಲಾಚಾರ್ಯ**
ಪ್ರಾಧ್ಯಾಪಕರು, ಪೂರ್ಣಪ್ರಜ್ಞ ವಿದ್ಯಾಪೀಠ

ಪ್ರಕಾಶಕರು :
**ವಸುಧಾರಾಮ್ ಪ್ರಿಂಟಿಂಗ್ ಅಂಡ್ ಪಬ್ಲಿಕೇಶನ್ ಹೌಸ್**
ನಂ. 52, ಶ್ರೀ ಲಕ್ಷ್ಮೀವೇಂಕಟೇಶನಿಲಯ, 1ನೇ ಕ್ರಾಸ್,
ಶ್ರೀರಾಮಪುರ, ಬೆಂಗಳೂರು- 560 021. ದೂರವಾಣಿ : 9535869583

ಪ್ರಥಮ ಮುದ್ರಣ : 2017

ಪ್ರತಿಗಳು : 500

ಬೆಲೆ : ರೂ. 50

ಅಕ್ಷರ ಜೋಡಣೆ : ಪ್ರೇಮ್‌ಕುಮಾರ್, ಮೊ. 9964334285

ಮುದ್ರಣ : ವಸುಧಾರಾಮ್ ಪ್ರಿಂಟಿಂಗ್ ಅಂಡ್ ಪಬ್ಲಿಕೇಶನ್ ಹೌಸ್
ಬೆಂಗಳೂರು- 560 021. ದೂರವಾಣಿ : 9535869583

# ಪ್ರಕಾಶಕರ ಮಾತು

ಮಹಾಲಯ ಹಾಗು ಶ್ರಾದ್ಧದ ಬಗ್ಗೆ ಅತ್ಯವಶ್ಯಕವಾಗಿ ತಿಳಿಯಬೇಕಾದ ಕೆಲವು ಮಾಹಿತಿಗಳನ್ನು ಹಾಗು ತರ್ಪಣಕ್ರಮ ಮತ್ತು ಆಶೌಚಕ್ರಮದ ವಿವರ, ಆಶೌಚಶುದ್ಧಿ ಕ್ರಮ, ಸಂಪರ್ಕದೋಷಪರಿಹಾರಗಳು ಮುಂತಾದ ಅಮೂಲ್ಯವಾದ ಮಾಹಿತಿಗಳನ್ನು ಮತ್ತು ಗಯಾಶ್ರಾದ್ಧ ಹಾಗು ಬದರೀ ಶ್ರಾದ್ಧಮಹಿಮೆಗಳ ವಿಷಯಗಳನ್ನು ಆಸಕ್ತ ಆಸ್ತಿಕರಿಗೆ ತಿಳಿಸುವ ಸಂಕಲ್ಪದ ಹಿನ್ನೆಲೆಯಲ್ಲಿ ಈ ಕೃತಿಯನ್ನು ಪ್ರಕಟಪಡಿಸಲಾಗಿದೆ. ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರಾದ ಶ್ರೀ ವಿದ್ವಾನ್ ಹೆಚ್.ಸತ್ಯನಾರಾಯಣಾಚಾರ್ಯರ ಅನುಮತಿ ಪಡೆದು ಅವರ ಲೇಖನಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ಹಾಗು ಶ್ರೀರಾಮವಿಟ್ಠಲಾಚಾರ್ಯರ ಕೆಲವು ಲೇಖನಗಳನ್ನೂ ಇಲ್ಲಿ ಸಂಗ್ರಹಿಸಲಾಗಿದೆ. ವೇದಾಂತ, ನ್ಯಾಯ, ಧರ್ಮಶಾಸ್ತ್ರ, ಜ್ಯೋತಿಷಗಳಲ್ಲಿ ಪರಿಣತ ಪಂಡಿತರಾದ ಶ್ರೀ ಸತ್ಯನಾರಾಯಣಾಚಾರ್ಯರು ಈ ಲೇಖನಗಳನ್ನು ಪರಿಶೀಲಿಸಿ ಉಪಕಾರಮಾಡಿರುತ್ತಾರೆ. ಅವರಿಗೆ ಭಕ್ತಿಪ್ರಣಾಮಗಳೊಂದಿಗೆ ಕೃತಜ್ಞತೆಯನ್ನು ಅರ್ಪಿಸುತ್ತಿದ್ದೇನೆ.

ಇತಿ ತಮ್ಮ ವಿಶ್ವಾಸಿ

**ಪ್ರಕಾಶಕರು**

**ವಸುಧಾರಾಮ್ ಪ್ರಿಂಟಿಂಗ್ ಅಂಡ್**

**ಪಬ್ಲಿಕೇಷನ್ ಹೌಸ್, ಬೆಂಗಳೂರು**

ಷಣ್ಣವತಿಯೆಂಬಕ್ಷರೇಡ್ಯನು
ಷಣ್ಣವತಿನಾಮದಲಿ ಕರೆಸುತ ।
ತನ್ನವರ ಸದ್ಭಕ್ತಿಪೂರ್ವಕದಿಂದ ಮಾಡುತಿಹ ॥
ಪುಣ್ಯಕರ್ಮವ ಸ್ವೀಕರಿಸಿ ಕಾ
ರುಣ್ಯಸಾಗರ ಸಲಹುವನು ಬ್ರ ।
ಹ್ಮಣ್ಯದೇವ ಭವಾಬ್ಧಿಪೋತ ಬಹು ಪ್ರಕಾರದಲಿ ॥

ದೇಹಗಳ ಕೊಡುವವನು ಅವರವ-
ರ ಹರವನು ಕೊಡದಿಹನೆ ಸುಮನಸ ।
ಮಹಿತ ಮಂಗಳಚರಿತ ಸದ್ಗುಣಭರಿತನನವರತ ॥
ಅಹಿಕಪಾರತ್ರಿಕ ಸುಖಪ್ರದ
ವಹಿಸಿ ಬೆನ್ನಲಿ ಬೆಟ್ಟವಮೃತವ ।
ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನು ॥

ದ್ರುಹಿಣ ಮೊದಲಾದಮರರಿಗೆ ಸ-
ನ್ಮಹಿಮ ಮಾಯಾರಮಣ ತಾನೇ ।
ಸ್ವಹನೆನಿಸಿ ಸಂತೃಪ್ತಿಬಡಿಸುವ ಸರ್ವಕಾಲದಲಿ ॥
ಪ್ರಹಿತ ಸಂಕರ್ಷಣನು ಪಿತೃಗಳಿ
ಗಹರನೆನಿಪ ಸ್ವಧಾಖ್ಯರೂಪದಿ ।
ಮಹಿಜ ಫಲತೃಣ ಪೆಸರಿನಲಿ ಪ್ರದ್ಯುಮ್ನನನಿರುದ್ಧ ॥

–ಪಿತೃಗಣ ಸಂಧಿ, ಹರಿಕಥಾಮೃತಸಾರ

# ವಿಷಯಾನುಕ್ರಮಣಿಕೆ

# ಮಹಾಲಯ ವಿಧಿ

ಆಷಾಢದ ಹುಣ್ಣಿಮೆಯಿಂದ ಐದನೇ ಪಕ್ಷ ಅಂದರೆ ಭಾದ್ರಪದ (ಬಹುಳ) ಕೃಷ್ಣಪಕ್ಷವು ಪಂಚಮ ಅಪರಪಕ್ಷ ಎಂದೂ, ಪಿತೃಪಕ್ಷ ಎಂದೂ, ಮಹಾಲಯದ ಪಕ್ಷವೆಂದೂ ಪ್ರಸಿದ್ಧವಾಗಿದೆ. ಈ ಅವಧಿಯಲ್ಲಿ ಕನ್ಯಾರಾಶಿಯಲ್ಲಿ ರವಿಯಿದ್ದರೆ ಇನ್ನೂ ವಿಶೇಷ. ಈ ಸಮಯದಲ್ಲಿ ಪಿತೃಗಳು ತಮ್ಮವರಿಂದ ಪಿಂಡ, ತಿಲೋದಕಗಳನ್ನು ನಿರೀಕ್ಷೆ ಮಾಡಿರುತ್ತಾರೆ. ಯಾರು ಶ್ರದ್ಧೆಯಿಂದ ಈ ಅವಧಿಯಲ್ಲಿ ಪಿತೃ ಆರಾಧನೆ ಮಾಡುವರೋ ಅವರಿಗೆ ಸಂತೃಪ್ತರಾದ ಪಿತೃಗಳು ಆಯುಷ್ಯ, ಸಂತಾನ, ಸಂಪತ್ತು, ಜ್ಞಾನ, ಭಕ್ತಿ ವೈರಾಗ್ಯಗಳು ಅಭಿವೃದ್ಧಿ ಆಗಲೆಂದು ಆಶೀರ್ವದಿಸುತ್ತಾರೆ.

ಈ ಮಹಾಲಯದಲ್ಲಿ ಪ್ರತಿನಿತ್ಯವೂ ಪಿತೃದೇವತೆಗಳ ತೃಪ್ತ್ಯರ್ಥ ಶ್ರಾದ್ಧವನ್ನು ಮಾಡಬೇಕು. ಅದಕ್ಕೆ ಶಕ್ತವಿಲ್ಲದಿದ್ದಲ್ಲಿ ಒಂದು ದಿನವಾದರೂ ಶ್ರಾದ್ಧವನ್ನು ಪಿಂಡಪ್ರದಾನ ಪುರಸ್ಸರ ಮಾಡಲೇಬೇಕು. ಪ್ರತಿನಿತ್ಯ ಶ್ರಾದ್ಧದ ಪ್ರತಿನಿಧಿಯಾಗಿ ತಿಲತರ್ಪಣವನ್ನು ಕೊಡಬೇಕು.

ಯಾರು ಈ ಕಾಲದಲ್ಲಿ ಪಿತೃಗಳಿಗೆ ತಿಲತರ್ಪಣ, ಪಿಂಡಪ್ರದಾನಗಳನ್ನು ಸಮರ್ಪಿಸುವುದಿಲ್ಲವೋ ಅವರಿಗೆ ಪಿತೃಗಳು ನಿರಾಶರಾಗಿ ಶಾಪವನ್ನು ಕೊಟ್ಟು ಹೋಗುವರು. ಪಿತೃಕೋಪವು ನಮ್ಮ ಭವಿಷ್ಯದ ಭಾಗ್ಯವನ್ನು, ವಂಶಾಭಿವೃದ್ಧಿಯನ್ನು ತಡೆಗಟ್ಟುವುದು. ಪಿತೃಪ್ರಸಾದವಿದ್ದರೆ ಮಕ್ಕಳು, ಮೊಮ್ಮಕ್ಕಳು, ಆರೋಗ್ಯ ಆಯುಷ್ಯಗಳನ್ನು ಪಡೆದು ಜೀವನದಲ್ಲಿ ಪ್ರಗತಿಯನ್ನು ಹೊಂದುವರು.

ಮಹಾಲಯ ಶ್ರಾದ್ಧದ ಬಗ್ಗೆ ಅವಶ್ಯ ತಿಳಿಯಬೇಕಾದ ಅನೇಕ ಮಾಹಿತಿಗಳನ್ನು, ನಿತ್ಯತರ್ಪಣ ಸಂಕಲ್ಪವಿಧಿಗಳನ್ನು, ಶ್ರಾದ್ಧಕ್ಕೆ ಸಂಬಂಧಿಸಿದ ಸೂಕ್ಷ್ಮ ವಿಷಯಗಳನ್ನು, ಅಡುಗೆ ಮತ್ತು ಬಡಿಸುವ ವಿಧಾನಗಳ ಬಗ್ಗೆಯೂ ತಿಳಿಯಬೇಕಾದ ಸಂಗತಿಗಳನ್ನು, ಶ್ರಾದ್ಧಕ್ಕೆ ಬೇಕಾದ ಸಾಮಗ್ರಿಗಳನ್ನು, ಪೂರ್ವ ತಯಾರಿಗಳನ್ನು ವಿದ್ವಾಂಸರಿಂದ ಕೇಳಿ ತಿಳಿದು ಇಲ್ಲಿ (ಸಚಿತ್ರವಾಗಿ)

ಸಂಗ್ರಹಿಸಲಾಗಿದೆ. ವಿಶೇಷ ವಿಷಯಗಳನ್ನು, ಸಂದೇಹಗಳು ಬಂದರೆ ಅದರ ನಿವಾರಣೆಯನ್ನು ವಿದ್ವಾಂಸರಲ್ಲಿ ಖುದ್ದಾಗಿ ಕೇಳಿ ಪರಿಹರಿಸಿಕೊಳ್ಳಬೇಕು. ದೇಶಭೇದದಿಂದ ಸಂಪ್ರದಾಯಭೇದಗಳು ಇರಬಹುದು. ಅದಕ್ಕೆ ಇಲ್ಲಿ ಕೊಟ್ಟಿರುವ ವಿಚಾರಗಳು ವಿರೋಧಿಗಳಲ್ಲ.

ಧರ್ಮಸಿಂಧು, ನಿರ್ಣಯಸಿಂಧು, ಕೃಷ್ಣಾಚಾರ್ಯಸ್ಮೃತಿಮುಕ್ತಾವಲೀ ಮುಂತಾದ ಗ್ರಂಥಗಳ ಆಧಾರದ ಮೇಲೆ ಈ ವಿಷಯಗಳನ್ನು ಇಲ್ಲಿ ಕೊಡಲಾಗಿದೆ.

## ಶ್ರಾದ್ಧದ ಬಗ್ಗೆ ಕೆಲವು ಪ್ರಮಾಣೋಕ್ತಿಗಳು

ಶ್ರಾದ್ಧ, ಯಜ್ಞ, ವಿವಾಹ, ಮಧುಪರ್ಕ, ಯೋಗದೀಕ್ಷಾ ಕಾಲಗಳಲ್ಲಿ ಪೂಜ್ಯರಾದ ಗುರುಗಳು ಬಂದಲ್ಲಿ ಅವರನ್ನು ಕೂಡಿಸಿಯೇ ಪಾದಪ್ರಕ್ಷಾಲನೆ ಮಾಡಬೇಕು. ನಿಲ್ಲಿಸಿ ಪಾದಪ್ರಕ್ಷಾಲನೆ ಮಾಡಿದರೆ ಪಿತೃಗಳು ನಿರಾಶರಾಗುವರು. **–ಸ್ಮೃತಿ ಮುಕ್ತಾವಲೀ**

ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಹಾಗೂ ಪಿಂಡಕ್ಕೆ ವಸ್ತ್ರಗಳನ್ನು ಸಮರ್ಪಿಸಲೇಬೇಕು. ಇಲ್ಲವಾದರೆ ಯಜ್ಞೋಪವೀತವನ್ನಾದರೂ ಕೊಡಲೇಬೇಕು. ಅಥವಾ ಪ್ರತಿನಿಧಿಯಾಗಿ ಯಥಾಶಕ್ತಿದ್ರವ್ಯವನ್ನಾದರೂ ಕೊಡಬೇಕು. ಯಜ್ಞೋಪವೀತ ದಾನದಿಂದ ವೇದದಾನದ ಫಲ. **–ಮಾರ್ಕಂಡೇಯ ಲೌಗಾಕ್ಷಿಸ್ಮೃತಿ**

ಶ್ರಾದ್ಧ ಮಾಡುವ ಯಜಮಾನನು ಶ್ರಾದ್ಧದ ದಿನದಂದು ದಂತಕಾಷ್ಠದಿಂದ ದಂತಧಾವನ, ತಾಂಬೂಲ ಸೇವನ, ತೈಲಾಭ್ಯಂಗ, ದ್ವಿಭೋಜನ, ಸ್ತ್ರೀಭೋಗ, ಔಷಧಿ ಸೇವನೆ (ಶಕ್ಯವಾಗಿದ್ದಲ್ಲಿ) ಪರಾನ್ನಭಕ್ಷಣ ಈ ಏಳನ್ನು ಬಿಡಬೇಕು. **–ದಾಲ್ಭ್ಯಸ್ಮೃತಿ**

ಶ್ರಾದ್ಧ ಭೋಜನ ಮಾಡುವ ವಿಪ್ರನು ಪುನರ್ಭೋಜನ, ಅಭ್ಯಂಗ, ಪ್ರಯಾಣ, ಅಧ್ಯಯನ, ಸ್ತ್ರೀಸಂಗ, ಬೇರೆ ದಾನ ಸ್ವೀಕಾರ, ಹೋಮ ಇವುಗಳನ್ನು ಬಿಡಬೇಕು. **–ಶ್ರಾದ್ಧಮಂಜರೀ**

ಶ್ರಾದ್ಧದಲ್ಲಿ ಯೋಗ್ಯ ಬ್ರಾಹ್ಮಣರು ಸಿಗದೆ ಇದ್ದಲ್ಲಿ ತಾನು

ಮಂತ್ರಜ್ಞನಾಗಿದ್ದು, ದರ್ಭಮಯವಾದ ಬ್ರಾಹ್ಮಣರನ್ನು ಇಟ್ಟುಕೊಂಡು ಚಟಕ ಶ್ರಾದ್ಧ ಮಾಡಿ ಅನಂತರ ಬ್ರಾಹ್ಮಣರಿಗೆ ಅನ್ನದಾನ ಮಾಡಬೇಕು. ಯಾವುದೂ ಆಗದಿದ್ದಲ್ಲಿ ಗೋಗ್ರಾಸವನ್ನಾದರೂ ಕೊಡಬೇಕು. -ಶ್ರಾದ್ಧಮಂಜರೀ

ಶ್ರಾದ್ಧ ಭೋಜನವನ್ನು ಮಾಡಿದವನು ಹತ್ತು ಸಲ ಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿದ ಜಲವನ್ನು ಪಾನ ಮಾಡಿದರೆ ಸಾಯಂಸಂಧ್ಯಾ, ಜಪ, ಹೋಮ ಮೊದಲಾದವುಗಳಿಗೆ ಅರ್ಹನಾಗುತ್ತಾನೆ. -ಶ್ರಾದ್ಧಮಂಜರೀ

ಮೃತಳಾದ ಮುತ್ತೈದೆಯ ಪಕ್ಷಶ್ರಾದ್ಧವನ್ನು ಅವಿಧವಾ ನವಮೀಯಂದೇ ಆಚರಿಸಬೇಕು. ತಂದೆ ಮೃತನಾದ ಮೇಲೆ ತಾಯಿಯ ಅವಿಧವಾ ನವಮೀ ಶ್ರಾದ್ಧವನ್ನು ಮಾಡಬಾರದು. ಶಸ್ತ್ರಾಸ್ತ್ರಗಳಿಂದ ಅಥವಾ ಅಪಘಾತಾದಿಗಳಿಂದ ಮೃತರಾದವರಿಗೆ ಚತುರ್ದಶಿಯಂದೇ ಪಕ್ಷಶ್ರಾದ್ಧವನ್ನು ಮಾಡಬೇಕು. ಅಮಾವಾಸ್ಯೆಯಂದು ಯಾವ ದೋಷವೂ ಇರದ ಕಾರಣ ಸರ್ವಪಿತೃಗಳಿಗೆ ಶ್ರಾದ್ಧ ಮಾಡಬಹುದು.

ಪಾಣಿಹೋಮದಿಂದ ದೇವಲೋಕ ಹೊಂದಿದ ಪಿತೃಗಳು, ಬ್ರಾಹ್ಮಣ ಭೋಜನದಿಂದ ಸ್ವರ್ಗಸ್ಥರಾದ ಪಿತೃಗಳು, ಪಿಂಡಪ್ರದಾನದಿಂದ ಯಮಲೋಕ ದಲ್ಲಿರುವ ಪಿತೃಗಳು, ವಿಕಿರಾನ್ನದಿಂದ ನರಕದಲ್ಲಿರುವ ಪಿತೃಗಳು, ತಿಲೋದಕದಿಂದ ತಿರ್ಯಕ್ ಯೋನಿಗಳಲ್ಲಿ ಜನಿಸಿರುವ ಪಿತೃಗಳು, ದಕ್ಷಿಣೆ ಪ್ರದಾನದಿಂದ ಮನುಷ್ಯ ಜನ್ಮದಲ್ಲಿ ಹುಟ್ಟಿರುವ ಪಿತೃಗಳು, ಭೂರಿ ಭೋಜನ ದಿಂದ ಅಸುರ ಯೋನಿಯಲ್ಲಿ ಜನಿಸಿದ ಪಿತೃಗಳು ತೃಪ್ತಿಯಾಗುವರು. ಆದ್ದ ರಿಂದಲೇ ಶ್ರಾದ್ಧದಲ್ಲಿ ಈ ಏಳು ಪ್ರಕಾರಗಳು ಸೇರಿವೆ. -ಸ್ಮೃತಿ ಮುಕ್ತಾವಲೀ

ಕರುಕುಡಿದ ಮೇಲೆ ಕರೆದ ಹಾಲು, ಗಂಗಾಜಲ, ಜೇನುತುಪ್ಪ, ರೇಷ್ಮೆವಸ್ತ್ರ, ಮಗಳ ಮಗ (ಯೋಗ್ಯನಾಗಿದ್ದರೆ), ಶ್ರಾದ್ಧಕಾಲ, ತಿಲ, ಈ ಏಳು ಶ್ರಾದ್ಧದಲ್ಲಿ ಅತ್ಯವಶ್ಯ. -ನಿರ್ಣಯಸಿಂಧು

ಶ್ರಾದ್ಧದಲ್ಲಿ ಹೆಸರುಬೇಳೆಯಿಂದ ಸಿದ್ಧವಾದ ಪದಾರ್ಥಗಳಿಂದ ಪಿತೃಗಳು ಒಂದು ತಿಂಗಳವರೆಗೆ, ಉದ್ದಿನ (ವಡೆ) ಪದಾರ್ಥಗಳಿಂದ ಮೂರು ತಿಂಗಳವರೆಗೆ, ಪರಮಾನ್ನದಿಂದ ಆರು ತಿಂಗಳವರೆಗೆ, ರವೆಯಿಂದ (ರವೆ

ಉಂಡೆ) ಮಾಡಿದ ಪದಾರ್ಥಗಳಿಂದ ವರ್ಷದವರೆಗೆ ತೃಪ್ತರಾಗುವರು. **-ಸ್ಮೃತಿ ಮುಕ್ತಾವಲೀ**

ನಿತ್ಯದಲ್ಲಿ ಗಾಯತ್ರೀ ಜಪಾನುಷ್ಠಾನವನ್ನು ಮಾಡುವ ಶ್ರೇಷ್ಠ ಬ್ರಾಹ್ಮಣರೇ ಶ್ರಾದ್ಧದಲ್ಲಿ ಅರ್ಹರಾದ ಬ್ರಾಹ್ಮಣರು. **-ವ್ಯಾಸವಚನ**

ಶ್ರಾದ್ಧ ಮಾಡುವವನಿಗೆ ತನ್ನ ಗೋತ್ರ ತಿಳಿಯದಿದ್ದಲ್ಲಿ ಕಾಶ್ಯಪಗೋತ್ರ ಜನ್ಯನೆಂದು ತಿಳಿದು ಶ್ರಾದ್ಧ ಕಾರ್ಯ ಮಾಡಬೇಕು. ಸರ್ವಪ್ರಾಣಿಗಳೂ, ಮಾನವರೂ ಕಶ್ಯಪರಿಂದಲೇ ಹುಟ್ಟಿದವರೆಂದು ಶ್ರುತಿಯು ಸಾರುತ್ತಿದೆ. **-ಶ್ರಾದ್ಧಕಲ್ಪಲತಾ**

ಶ್ರಾದ್ಧಕಾರ್ಯದಲ್ಲಿ ಬ್ರಾಹ್ಮಣರಿಗೆ ಕ್ಷಣ (ಆಮಂತ್ರಣ) ಕೊಟ್ಟು ಸಂಕಲ್ಪ ಮುಗಿದು ಪಾಕ ಪ್ರಾರಂಭವಾಗಿದ್ದಲ್ಲಿ ಆಶೌಚಸೂತಕಾದಿಗಳು ಹತ್ತುವುದಿಲ್ಲ.

ನಮ್ಮ ವಂಶದಲ್ಲಿ ದಾನಿಗಳು ಉದಯಿಸಲಿ, ಅಧ್ಯಯನ, ಅಧ್ಯಾಪನಗಳ ವೇದ ಪರಂಪರೆ ವಂಶದೊಂದಿಗೆ ಬೆಳೆದು ಬರಲಿ, ಅತಿಥಿಗಳ ಉಪಚಾರ ಬಹುವಾಗಿ ಲಭಿಸಲಿ, ವೇದಾರ್ಥ ಅನುಸಂಧಾನದಲ್ಲಿ ಮನಸ್ಸು ವಿಶೇಷವಾಗಿ ಪ್ರವರ್ತಿಸಲಿ. ಶ್ರದ್ಧೆ, ಆದರ, ಉಪಚಾರ, ಭಕ್ತಿ, ವಿಶ್ವಾಸಗಳು ಹೆಚ್ಚಾಗಲಿ ಎಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಬೇಕು. **-ಮನುಸ್ಮೃತಿ**

ಶ್ರಾದ್ಧದಲ್ಲಿ ಗೋಪಿಚಂದನದ ಸಣ್ಣತುಂಡು ಅಥವಾ ಸಾಸಿವೆ ಕಾಳಿನಷ್ಟಾದರೂ ಬ್ರಾಹ್ಮಣರಿಗೆ ಕೊಟ್ಟಲ್ಲಿ ಬ್ರಹ್ಮಹತ್ಯಾದಿದೋಷಗಳು ಪರಿಹಾರವಾಗುವುವು. **-ಮಾರ್ಕಂಡೇಯ ಸ್ಮೃತಿ**

## ಪಕ್ಷ ಶ್ರಾದ್ಧ ಎಂದು?

೧. ಪಾಡ್ಯ, ಷಷ್ಠೀ, ಶುಕ್ರವಾರ, ಜನ್ಮನಕ್ಷತ್ರದಂದು, ರೋಹಿಣೀ, ರೇವತೀ, ಮಖಾ ನಕ್ಷತ್ರಗಳಂದು ಪಕ್ಷಶ್ರಾದ್ಧ ಮಾಡಬಾರದು. ಈ ದಿನಗಳಲ್ಲಿ ತಂದೆ ಅಥವಾ ತಾಯಿಯ ಮೃತ ತಿಥಿಯೇ ಇದ್ದರೆ ಈ ನಿಯಮವನ್ನು ಅನುಸರಿಸಬೇಕಿಲ್ಲ. ಮೃತತಿಥಿಯಂದು ಪಕ್ಷಶ್ರಾದ್ಧ ಮಾಡುವುದು ಶ್ರೇಷ್ಠ.

೨. ಮಹಾಲಯದ ಮಧ್ಯೆ ಕಾಲಶ್ರಾದ್ಧ ಬಂದರೆ ಕಾಲಶ್ರಾದ್ಧ ಆದಮೇಲೆ ಪಕ್ಷಶ್ರಾದ್ಧ ಮಾಡಬೇಕು.

೩. ಹುಣ್ಣಿಮೆ, ಸಪ್ತಮೀ, ದ್ವಾದಶೀ, ಅಮಾವಾಸ್ಯೆ, ಭರಣಿ ನಕ್ಷತ್ರದಂದು ಅಷ್ಟಮಿಯಂದು ಪಕ್ಷಶ್ರಾದ್ಧ ಮಾಡಬಹುದು.

೪. ಪಕ್ಷದ ೧೫ ದಿನಗಳಲ್ಲಿ ಅನಾನುಕೂಲವಾದರೆ ತುಲಾಮಾಸದ ಕೃಷ್ಣಪಕ್ಷದಲ್ಲಿ ಮಹಾಲಯ ಶ್ರಾದ್ಧ ಮಾಡಬಹುದು.

**ಪಕ್ಷದ ಮಹಾಲಯ ಶ್ರಾದ್ಧದಲ್ಲಿ ದರ್ಭೆಯ ಬಳಕೆ**

೧. ಪಿಂಡಪ್ರದಾನದ ಮುಂಚೆ ಅದರ ಬುಡದಲ್ಲಿ ಹಾಸಲು ತುದಿಯಿರುವ ೧೦೧ ಅಥವಾ ೬೪ ದರ್ಭೆಗಳು. ಇದಕ್ಕೆ ಆಸ್ತರಣ(ಹಾಸು) ಎಂದು ಹೆಸರು.

೨. ವಿಶ್ವೇದೇವತೆಗಳು ಹಾಗೂ ಪಿತೃಗಳಿಗಾಗಿ ಇರುವ ಕಲಶದಲ್ಲಿ ಇಡಬೇಕಾದ ಕೂರ್ಚಕ್ಕಾಗಿ ಇಪ್ಪತ್ತೊಂದು ದರ್ಭೆಗಳು.

೩. ಪವಿತ್ರಕ್ಕೆ ಮೂರು ದರ್ಭೆ.

ವಿ.: ತುದಿಯಿರದ ಮೊಂಡು ದರ್ಭೆ ಬಳಸದಿರುವುದೊಳಿತು. ತುಂಡು ದರ್ಭೆಗಳಾದರೂ ತುದಿಯಿರಲೇಬೇಕು.

**ಎಷ್ಟು ಪವಿತ್ರ? ವಿಸರ್ಜನೆ ಯಾವಾಗ?**

ಶ್ರಾದ್ಧದಲ್ಲಿ ಒಟ್ಟು ಐದು ಪವಿತ್ರಗಳ ಧಾರಣೆಯಿದೆ.

೧. ಆರಂಭದಲ್ಲಿ ಒಂದು ಪವಿತ್ರದ ಧಾರಣೆ, ಪಾದ ಪಕ್ಷಾಲನೆಯ ಬಳಿಕ ವಿಸರ್ಜನೆ.

೨. ಪಾದಪ್ರಕ್ಷಾಲನದ ಬಳಿಕ ಮತ್ತೊಂದು ಪವಿತ್ರದ ಧಾರಣೆ, ಪಿಂಡ ಆಘ್ರಾಣ(ಅನ್ನ ಮೂಸುವುದು)ದ ತರುವಾಯ ಅದರ ವಿಸರ್ಜನೆ.

೩. ಆಘ್ರಾಣವಾದ ಮೇಲೆ ಇನ್ನೊಂದು ಪವಿತ್ರದ ಧಾರಣೆ. ಉಚ್ಛಿಷ್ಟ ಪಿಂಡಪ್ರದಾನದ ಅನಂತರ ಅದರ ವಿಸರ್ಜನೆ.

೪. ಉಚ್ಛಿಷ್ಟಪಿಂಡ ಪ್ರದಾನವಾದ ತರುವಾಯ ಮತ್ತೊಂದು ಪವಿತ್ರದ ಧಾರಣೆ ಶ್ರಾದ್ಧಾಂತ್ಯದಲ್ಲಿ ವಿಸರ್ಜನೆ.

೫. ಕೃಷ್ಣಾರ್ಪಣವಾದ ಅನಂತರ ಒಂದು ಪವಿತ್ರದ ಧಾರಣೆ, ತರ್ಪಣದ ಬಳಿಕ ವಿಸರ್ಜನೆ, ಪರೇಽಹನಿ (ಮರುದಿನ) ಕೊಡಬೇಕಾದ ತರ್ಪಣ ಶ್ರಾದ್ಧದ ಬಳಿಕವೇ ಕೊಡುವುದಾದರೆ.

**ಆವಾಹನಕ್ಕಾಗಿ ಎರಡು ಪವಿತ್ರ**

೧. ವಿಶ್ವೇದೇವಸ್ಥಾನದಲ್ಲಿರುವ ಪವಿತ್ರ–ತುದಿಯಿರುವ ಎರಡು ದರ್ಭೆಯ ಋಷಿಗಂಟಿನ ಪವಿತ್ರ.

೨. ಪಿತೃದೇವತೆಯ ಆವಾಹನಕ್ಕಾಗಿ ಪವಿತ್ರ, ತುದಿಯಿರುವ ಎರಡು ದರ್ಭೆ ನೇರವಾಗಿ, ತಲೆಕೆಳಕಾಗಿ ಒಂದು ದರ್ಭೆ ಹೀಗೆ ಒಟ್ಟೂ ಮೂರು ದರ್ಭೆಯ ಋಷಿಗಂಟಿನ ಪವಿತ್ರ.

**ಪಿಂಡದಲ್ಲಿ ಏನೇನು?**

**ತಿಲಮನ್ನಂ ಚ ಪಾನೀಯಂ ಪಯೋದಧಿಗುಡಂ ತಥಾ ।**

**ಮಧುಸರ್ಪಿಸ್ಸಮಾಯುಕ್ತಂ ಅಷ್ಟಾಂಗಂ ಪಿಂಡಲಕ್ಷಣಮ್ ॥**

ಎಳ್ಳು, ಅನ್ನ, ಕಲಶದ ನೀರು, ಹಾಲು, ಮೊಸರು, ಬೆಲ್ಲ, ಜೇನುತುಪ್ಪ, ತುಪ್ಪ ಈ ಎಂಟು ದ್ರವ್ಯಗಳನ್ನು ಸೇರಿಸಬೇಕು.

**ಪಿಂಡ ವಿಸರ್ಜನೆ**

೧. ಶ್ರಾದ್ಧದ ವಿಸರ್ಜಿತ ಪಿಂಡವನ್ನು ನೆಲದಲ್ಲಿ ಹೂಳಬಹುದು. ನದೀತೀರದಲ್ಲಿ ಮಾಡಿದಾಗ ನದಿಯ ಹರಿಯುವ ಪ್ರವಾಹದಲ್ಲಿ ಬಿಡಬಹುದು. ಗೋವುಗಳಿಗೆ ಕೊಡಬಹುದು.

೨. ಚಟಕದ ಬ್ರಾಹ್ಮಣರ ಎಲೆಗೆ ಬಡಿಸಿದ ಅನ್ನವನ್ನು ನೆಲದಲ್ಲಿಯೇ ಹೂಳಬೇಕು. ಹಸುಗಳಿಗೆ ಕೊಡಬಾರದು. ನದಿಯಲ್ಲಿ ಹಾಕಬಾರದು.

ಪಿಂಡದೊಂದಿಗೆ ಬೆರೆಸಬಾರದು. ಪಿಂಡದ ಜೊತೆಯಲ್ಲಿ ಭೂಸ್ಥಾಪನೆ ಮಾಡಬಾರದು.

೩. ಜಲಚರ ಪ್ರಾಣಿಗಳು ಪಿಂಡವನ್ನು ತಿಂದರೆ ಪರವಾಗಿಲ್ಲ, ನಾಯಿ ಮಾತ್ರ ಮುಟ್ಟಬಾರದು. ಶ್ರಾದ್ಧ ಹಾಳಾಗುತ್ತದೆ.

**ಶ್ರಾದ್ಧದಂದು ಬಡಿಸುವ ಬಗ್ಗೆ...**

೧. ಮೊದಲು ಅನ್ನ, ತುಪ್ಪ, ತೊವ್ವೆ, ಪಾಯಸ, ಭಕ್ಷ್ಯ, ವ್ಯಂಜನ ಮುಂತಾದ ರೀತಿಯಲ್ಲಿ ಚಟಕ ಬ್ರಾಹ್ಮಣರ ಎಲೆಯಲ್ಲಿ ಬಡಿಸುವ ಕ್ರಮ.

೨. ಭೂರಿಭೋಜನದ ಬ್ರಾಹ್ಮಣರ ಎಲೆಗೆ ಹೀಗೆ ಬಡಿಸಬೇಕಾದ ಅಗತ್ಯವಿಲ್ಲ. ಉಪ್ಪು, ಬಿಟ್ಟು ಚಟ್ನಿ ಕೋಸಂಬರಿ ಕ್ರಮದಲ್ಲಿ ಮಾಮೂಲಿನಂತೆ ಬಡಿಸುವುದು.

೩. ತುಪ್ಪವನ್ನು ಕರಗಿಸಿ ಬಡಿಸಬಾರದು. ಗಟ್ಟಿ ತುಪ್ಪವನ್ನೇ ಬಡಿಸಬೇಕು.

೪. ತುಪ್ಪ, ಉಪ್ಪುಗಳನ್ನು ಕೈಯಿಂದ ಬಡಿಸಲೇಬಾರದು, ಚಮಚ ಮುಂತಾದವನ್ನು ಬಳಸಬೇಕು.

**ಶ್ರಾದ್ಧದಲ್ಲಿ ಅರ್ಘ್ಯ, ಪಿಂಡ, ತರ್ಪಣಕ್ರಮ**

**ಆದೌ ಪಿತಾ, ತಥಾ ಮಾತಾ, ಸಾಪತ್ನ ಜನನೀ ತಥಾ ।**
**ಮಾತಾಮಹಾಸ್ಸಪತ್ನೀಕಾಃ ಆತ್ಮಪತ್ನ್ಯಸ್ತ್ವನಂತರಮ್ ॥**

**ಸುತಭ್ರಾತೃಪಿತೃವ್ಯಾಶ್ಚ ಮಾತುಲಾಸ್ಸಹಭಾರ್ಯಕಾಃ ।**
**ದುಹಿತಾ ಭಗಿನೀ ಚೈವ ದೌಹಿತ್ರೋ ಭಾಗಿನೇಯಕಃ ॥**

**ಪಿತೃಷ್ವಸಾ ಮಾತೃಷ್ವಸಾ ಜಾಮಾತಾ ಭಾವುಕಸ್ಸ್ನುಷಾ ।**
**ಶ್ವಶುರಶ್ಶ್ಯಾಲಕಶ್ಚೈವ ಸ್ವಾಮಿನೋ ಗುರುಮಿತ್ರಕಾಃ ॥**

**ಪಿತೃಣಾಂ ಪಶ್ಚಿಮೇ ಭಾಗೇ ಮಾತೃಪಿಂಡಂ ಯಥಾಕ್ರಮಮ್ ।**
**ಮಾತಾಮಹಾಶ್ಚ ತತ್ಪೂರ್ವಂ ಆತ್ಮಪತ್ನ್ಯಸ್ತದುತ್ತರಂ ॥**

**ಸುತಭ್ರಾತೃಪಿತೃವ್ಯಾಶ್ಚ ಮಾತಾಪಿತ್ರೋಶ್ಚ ಮಧ್ಯಮೇ ।**
**ಮಾತಾಮಹ–ಮಹೀಮಧ್ಯೇ ಮಾತುಲಾಸ್ಸಹಭಾರ್ಯಕಾಃ ॥**




1. ಪಿತೃ(ತಂದೆ
2. ಪಿತಾಮಹ(ತಂದೆಯತಂದೆ)
3. ಪ್ರಪಿತಾಮಹ(ತಾತನತಂದೆ)
4. ಮಾತೃ(ತಾಯಿ)
5. ಪಿತಾಮಹೀ(ತಂದೆಯತಾಯಿ)
6. ಪ್ರಪಿತಾಮಹೀ(ತಾತನತಾಯಿ)
7. ಮಾತಾಮಹ(ತಾಯಿಯ ತಂದೆ)
8. ಮಾತುಃಪಿತಾಮಹ(ತಾಯಿಯ ತಾತ)
9. ಮಾತುಃಪ್ರಪಿತಾಮಹ(ತಾಯಿಯ ಮುತ್ತಜ್ಜ)
10. ಮಾತಾಮಹೀ, ಸಾಪತ್ನಜನನೀ (ತಾಯಿಯ ತಾಯಿ, ಸವತಿತಾಯಿ)
11. ಮಾತುಃಪಿತಾಮಹೀ(ತಾಯಿಯ ತಂದೆಯ ತಾಯಿ)
12. ಮಾತುಃಪ್ರಪಿತಾಮಹೀ(ತಾಯಿಯ ಅಜ್ಜನತಾಯಿ)
13. ಆತ್ಮಪತ್ನೀ(ಕರ್ತೃವಿನ ಹೆಂಡತಿ)
14. ಆತ್ಮಸುತ(ಕರ್ತೃವಿನಮಗ)
15. ತನ್ನ ಸಹೋದರ
16. ಆತನಪತ್ನೀ
17. ಪಿತೃವ್ಯ(ಚಿಕ್ಕಪ್ಪ)
18. ಆತನ ಹೆಂಡತಿ, ಮಕ್ಕಳು
19. ಮಾತುಲ(ಸೋದರಮಾವ)
20. ಆತನ ಹೆಂಡತಿ, ಮಕ್ಕಳು
21. ತನ್ನ ತಂಗಿ, ಅವಳ ಗಂಡ, ಮಕ್ಕಳು
22. ತನ್ನ ಮಗಳು, ಅವಳ ಗಂಡ, ಮಕ್ಕಳು
23. ಸೋದರಳಿಯ, ಸೋದರತ್ತೆ ಅವರ ಗಂಡ/ ಹೆಂಡತಿ, ಮಕ್ಕಳು
24. ಚಿಕ್ಕಮ್ಮ ಅವಳ ಗಂಡ, ಮಕ್ಕಳು
25. ಮಾವ, ಅತ್ತೆ
26. ಮೈದುನ, ಭಾವ ಅವರ ಹೆಂಡತಿ, ಮಕ್ಕಳು
27. ಮಂತ್ರೋಪದೇಶಕ ಗುರು
28. ಶಾಸ್ತ್ರೋಪದೇಶದ ಆಚಾರ್ಯ
29, 30. ಸ್ನೇಹಿತರು, ಆಪ್ತರು, ಅವರ ಹೆಂಡತಿ, ಮಕ್ಕಳು

**ಕುತಪಕಾಲ**

ಶ್ರಾದ್ಧದಲ್ಲಿ ಕುತಪ ಕಾಲಕ್ಕೆ ಬಹಳ ಮಹತ್ತ್ವವಿದೆ. ಈ ಕಾಲದಲ್ಲಿಯೇ ಶ್ರಾದ್ಧ ಮಾಡಬೇಕು. ೬ ಗಂಟೆಗೆ ಸೂರ್ಯೋದಯವಾದರೆ ಸುಮಾರು ೧೧ ಗಂಟೆ ೩೫ ನಿಮಿಷಕ್ಕೆ ಕುತಪಕಾಲ ಬಂದಿರುತ್ತದೆ. ವೈಶ್ವದೇವಾದಿಗಳು ಮುಗಿದು ಚಟಕ ಬ್ರಾಹ್ಮಣರ ಪಾದ ಪ್ರಕ್ಷಾಲನೆ ಮುಗಿದ ಬಳಿಕ ಶ್ರಾದ್ಧದ ಪ್ರಧಾನಾಂಗ ಆರಂಭ. ಈ ಭಾಗದಿಂದ ಕುತಪಕಾಲದಲ್ಲಿ ಶ್ರಾದ್ಧ ನಡೆಯಬೇಕು. ಸುಮಾರು ೧೦.೩೦ಕ್ಕೆ ವೈಶ್ವದೇವಾದಿ ಶ್ರಾದ್ಧ ಪೂರ್ವಾಂಗ ಶುರು ಮಾಡಿದರೆ ೧೧.೩೫ಕ್ಕೆ ಕುತಪಕಾಲದಲ್ಲಿ ಶ್ರಾದ್ಧದ ಮುಂದುವರಿಕೆಗೆ ಸರಿಯಾಗುತ್ತದೆ. ವೈಶ್ವದೇವ ಮಾಡದೆ ಶ್ರಾದ್ಧ ಮಾಡಲೇಬಾರದು. (ಪಕ್ಷ–ದ್ವಾದಶೀ–ಧನುರ್ಮಾಸದಲ್ಲಿ ಈ ಕುತಪಕಾಲದ ನಿರೀಕ್ಷೆ ಬೇಕಿಲ್ಲ) ಯಾವ ದಿನದಲ್ಲಾದರೂ ೩.೧೫ರ ಒಳಗೆ ಶ್ರಾದ್ಧ, ಬ್ರಾಹ್ಮಣರ ಭೋಜನ, (ಪರೇಽಹನಿ ಅಪಕರ್ಷ) ತರ್ಪಣ, ಕರ್ತೃವಿನ ಭೋಜನ ಎಲ್ಲವೂ ಮುಗಿದಿರಬೇಕು.

**ಎಲೆ ಅಡಿಕೆ**

ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ನಾಕು ಅಥವಾ ಐದು ವೀಳ್ಯದೆಲೆಗಳನ್ನು ಅಷ್ಟೇ ಸಂಖ್ಯೆಯ ಬಟ್ಟಲಡಿಕೆಯನ್ನೂ ಕೊಡಬೇಕು. ಪುಡಿ ಅಡಿಕೆಯನ್ನು ಕೊಡಬಾರದು. ಎರಡು ಎಲೆಗಳನ್ನು ಕೊಡಬಾರದು. ನಾಕು ಅಥವಾ ಐದಕ್ಕಿಂತ ಕಡಿಮೆ ಎಲೆಗಳನ್ನು ಶ್ರಾದ್ಧದಲ್ಲಿ ಮಾತ್ರವಲ್ಲ, ಯಾವಾಗಲೂ ಬ್ರಾಹ್ಮಣರಿಗೆ ಕೊಡಲೇಬಾರದು.

**ಪುರೋಹಿತರಿಗೆ ಸಲ್ಲುವ ದಕ್ಷಿಣೆಗಳು**

೧. ಕಲಶದಲ್ಲಿ ಹಾಕಿದ ದ್ರವ್ಯ (ಹಣ)

೨. ಬ್ರಹ್ಮದಂಡ ದ್ರವ್ಯ

೩. ವಿಷ್ಣುಪಾದದ ಮೇಲೆ ಧಾರೆಯೆರೆದ ದ್ರವ್ಯ

ವಿಶ್ವೇದೇವ ಸ್ಥಾನದಲ್ಲಿ ಹಾಗೂ ಪಿತೃಸ್ಥಾನದಲ್ಲಿಟ್ಟಿರುವ ದಕ್ಷಿಣೆಯನ್ನು

ಭೋರಿಭೋಜನದಲ್ಲಿ ಆಹೂತ ಬ್ರಾಹ್ಮಣರಿಗೆ ಸೇರಿಸತಕ್ಕದ್ದು. ಕ್ರಿಯಾದಕ್ಷಿಣೆ ಅಲ್ಲದೆ ಭೋಜನ ದಕ್ಷಿಣೆ ಬೇರೆ ಕೊಡಬೇಕು.

**ದಕ್ಷಿಣೆ**

ಹಿಂದೊಮ್ಮೆ ದೇವತೆಗಳು ಯಜ್ಞಗಳನ್ನು ಮಾಡಿದರೂ ಫಲ ದೊರೆಯದೆ ಭಗವಂತನಲ್ಲಿ ಮೊರೆಯಿಟ್ಟರಂತೆ. 'ಯಜ್ಞ' ಎಂದರೆ ನಾನು. ನನ್ನನ್ನು ಮಾತ್ರ ಆರಾಧನೆ ಮಾಡಿದರೆ ಸಾಲದು. ಜೊತೆಗೆ ದಕ್ಷಿಣೆ ಸೇರಿಸಬೇಕು. ದಕ್ಷಿಣಾ ಎಂದರೆ ಲಕ್ಷ್ಮೀದೇವಿ. ದಕ್ಷಿಣಾ ಸಹಿತವಾಗಿ ಯಜ್ಞ ಮಾಡಿದಾಗಲೇ ಫಲದೊರೆಯುವುದು ಎಂದು ಭಗವಂತ ನುಡಿದನು. ಈ ಸಂದರ್ಭ ಬ್ರಹ್ಮವೈವರ್ತ ಪುರಾಣದಲ್ಲಿ ಬರುತ್ತದೆ.

ಪುರೋಹಿತರ ದಕ್ಷಿಣೆಯನ್ನು ಹೋಮ ಇರಲಿ, ವ್ರತ ಇರಲಿ, ಶ್ರಾದ್ಧ ಇರಲಿ ಕಾರ್ಯಕ್ರಮದ ಕೊನೆಯಲ್ಲಿ ಕೊಡಲೇಬೇಕು. ತಡ ಮಾಡಬಾರದು. ತಡ ಮಾಡಿದಷ್ಟು ಎರಡು, ಮೂರು ಪಟ್ಟು ಹೆಚ್ಚಿಗೆ ಕೊಡಬೇಕಾಗುತ್ತದೆ ಯೆಂದು ತಿಳಿಸಿ ಅದರ ಪಟ್ಟಿಯನ್ನೇ ಪುರಾಣದಲ್ಲಿ ಕೊಡಲಾಗಿದೆ.

ಶ್ರೀವಿಜಯಧ್ವಜರು ಭಾಗವತವ್ಯಾಖ್ಯಾನದಲ್ಲಿ ಒಂದೆಡೆ ದಕ್ಷಿಣಾ ಶಬ್ದದ ಅರ್ಥವನ್ನು ಹೀಗೆ ವಿವರಿಸುವರು. ''ನಾವು ಮಾಡಿದ ಧರ್ಮಾಚರಣೆಗೆ ನಮ್ಮ ಮನೋರಥವನ್ನು ಈಡೇರಿಸುವಲ್ಲಿ ದಕ್ಷತೆಯನ್ನು ಕೊಡುವುದರಿಂದ ''ದಕ್ಷಿಣೆ''.

ತನ್ನ ದಕ್ಷ(ಬಲ) ಭಾಗದಲ್ಲಿ ಇನ–ಸ್ವಾಮಿಯನ್ನು ಹೊಂದಿರುವಳಾದ ಕಾರಣ ಲಕ್ಷ್ಮೀದೇವಿಗೆ ''ದಕ್ಷಿಣಾ'' ಎಂದು ಹೆಸರು. ಭಗವಂತನ ಎಡಭಾಗದಲ್ಲಿರುವ ಲಕ್ಷ್ಮಿಗೆ ಭಗವಂತನ ಬಲಭಾಗದಲ್ಲಿರುವುದು ತಾನೆ? ಆದ್ದರಿಂದ ದಕ್ಷಿಣಾ ಸಹಿತವಾಗಿಯೇ ದಾನ, ಯಜ್ಞ, ಶ್ರಾದ್ಧ ಎಲ್ಲವನ್ನೂ ಮಾಡಬೇಕು. ಎಲ್ಲ ಪುರಾಣಗಳೂ ಒಕ್ಕೊರಲಿನಿಂದ ಸಾರುವಂತೆ ಧಾರ್ಮಿಕ ಕಾರ್ಯಕ್ರಮಗಳಲ್ಲಿ ವಿತ್ತಲೋಭವನ್ನು ತೋರಬಾರದು. ದೇವರು ಕೊಟ್ಟ

ಸಂಪತ್ತನ್ನು ದೇವರಿಗೆ ವಂಚನೆಯಿಲ್ಲದೆ ಸಮರ್ಪಿಸಿದರೆ ಸಂಪದಭಿವೃದ್ಧಿ ಯಾಗುವುದು. ಮಧ್ಯಮ ವರ್ಗದವರು ವರ್ಷದ ಆರಂಭದಿಂದಲೇ ಪಿತೃಕ್ರಿಯೆಗೆ ಸ್ವಲ್ಪ ಹಣವನ್ನು ಸಂಗ್ರಹಿಸಿ ಶ್ರಾದ್ಧಪಕ್ಷ ಕಾಲಗಳಲ್ಲಿ ಧಾರಾಳವಾಗಿ ಬಳಸಬಹುದು. ಒಟ್ಟಿನಲ್ಲಿ ನಮಗಾಗಿ ಶ್ರಮವಹಿಸಿದ ಬ್ರಾಹ್ಮಣರು ಅತೃಪ್ತಿಪಡದಂತೆ ನಿರ್ವಂಚನೆಯಿಂದ ದಾನ–ದಕ್ಷಿಣೆಗಳನ್ನು ಕೊಡಬೇಕೆನ್ನು ವುದು ಮುಖ್ಯ. ಕರ್ತೃಗಳು ಶಕ್ತಿಯಿದ್ದು ಲೋಭಿಗಳಾದಾಗ ಪುರೋಹಿತರು ಬಾಯಿ ಬಿಟ್ಟು ಕೇಳುವ ಪ್ರಸಂಗ ಬರಬಹುದು. ಅದಕ್ಕೆ ಅವಕಾಶವೀಯ ಬಾರದು. ಪುರೋಹಿತರೂ ಅತಿ ಆಸೆಗೆ ಒಳಗಾಗದೆ, ಕ್ರಿಯಾಲೋಪ ಮಾಡದೆ ಸಂತೃಪ್ತಿಯಿಂದ ಯಜಮಾನನಿಗೆ ಒಳಿತಾಗಲೆಂದು ಹರಸಬೇಕು. ಧರ್ಮಕಾರ್ಯಗಳಿಗೆ ಹಣದ ಮೊತ್ತವನ್ನು ನಿಗದಿ ಮಾಡುವ ವ್ಯಾವಹಾರಿಕ ಬುದ್ಧಿಯನ್ನು ಪುರೋಹಿತರು ತೋರಿಸಬಾರದು. ಇಷ್ಟಕ್ಕೆ ಇಷ್ಟು ಯಾಕೆ? ದವಸ–ಧಾನ್ಯಗಳು, ವಸ್ತ್ರಗಳೂ, ಅವರಿಗೇ ಸೇರುತ್ತದಲ್ಲ ಎಂಬ ಆತಂಕ ಸಹಿತವಾದ ವ್ಯವಹಾರದ ಮಾತುಗಳನ್ನು ಯಜಮಾನನೂ ಆಡಬಾರದು. ನಗರದಲ್ಲಿ ಸಂಚಾರವೆಚ್ಚ, ಅವರು ಶ್ರಮ ವಹಿಸುವ ಸಮಯ, ಶ್ರಮಗಳನ್ನು ಗಮನಿಸಬೇಕಲ್ಲದೆ ಗುರುತ್ವ ಬುದ್ಧಿಪೂರ್ವಕವಾಗಿ ಕೊಡಬೇಕು.

## ಭೋಜನದಲ್ಲಿ ಯಾವ ಸ್ಥಾನಕ್ಕೆ ಯಾರು?

ಪಿತೃಸ್ಥಾನಕ್ಕೆ ಮೃತರ ಅಳಿಯ, ತಂಗಿ ಗಂಡ, ಮಗಳ ಮಗ, ಭಾವ–ಮೈದುನರು–ಇವರಲ್ಲಿ ಯೋಗ್ಯರಾಗಿದ್ದಲ್ಲಿ (ಸಂಧ್ಯಾ, ದೇವತಾರ್ಚನೆ, ಏಕಾದಶೀ ಅನುಷ್ಠಾನ ಮಾಡುತ್ತಿದ್ದಲ್ಲಿ) ಕೂಡಿಸಬಹುದು. ಶ್ರೋತ್ರಿಯ ಬಂಧುವಾಗಿದ್ದರೆ ಒಳಿತೆನ್ನುವುದು ಭಾವ. ವಿಶ್ವೇದೇವಸ್ಥಾನಕ್ಕೆ ಯಾವ ಶ್ರೋತ್ರಿಯ ವಿದ್ವಾಂಸರು ಪರವಾಗಿಲ್ಲ.

## ಅವಿಧವಾ ನವಮಿ

ಇಂದು ಇಬ್ಬರು ಬ್ರಾಹ್ಮಣರನ್ನಲ್ಲದೆ ಮೃತರ ಹೆಣ್ಮಕ್ಕಳಿಗೂ ಅವಶ್ಯ ಭೋಜನ ಮಾಡಿಸಬೇಕು.

**ಎಳ್ಳಿನ ಮಹತ್ತ್ವ**

**ತಿಲೈಃ ಆಜ್ಯೇನ ಹೋತವ್ಯಂ ಸರ್ವಪಾಪಹರಾಸ್ತಿಲಾಃ ।**
**ತಿಲಾಃ ರಕ್ಷಂತ್ವಸುರಾಣಾಂ ದರ್ಭಾ ರಕ್ಷಂತು ರಕ್ಷಸಾಂ ।**
**ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀ ತಿಲೋದಕೀ ।**
**ತಿಲಭೋಕ್ತಾ ಚ ದಾತಾ ಚ ಷಟ್ ತಿಲಾಃ ಪಾಪನಾಶನಾಃ ॥**

ಎಳ್ಳಿನಿಂದ ಹೋಮವನ್ನು ಮಾಡಿದರೆ ಎಲ್ಲಾ ಪಾಪಗಳು ನಾಶವಾಗುತ್ತವೆ. ಅಸುರರಿಂದ, ಭೂತಪ್ರೇತಗಳಿಂದ ಬರುವ ಬಾಧಕಗಳನ್ನು ಎಳ್ಳು ದರ್ಭೆಗಳು ನಿವಾರಿಸುತ್ತವೆ. ಎಳ್ಳೆಣ್ಣೆಯಿಂದ ದೀಪ ಹಚ್ಚುವುದು, ಎಳ್ಳುಗಳಿಂದ ಹೋಮ ಮಾಡುವುದು, ಪಿತೃಗಳಿಗೆ ಎಳ್ಳು ನೀರನ್ನು ಬಿಡುವುದು, ಎಳ್ಳನ್ನು ತಿನ್ನುವುದು, ಎಳ್ಳುದಾನ ಕೊಡುವುದು, ಈ ಆರು ವಿಧವಾದ ಎಳ್ಳಿನ ಉಪಯೋಗದಿಂದ ಎಲ್ಲಾ ಪಾಪಗಳು ನಾಶವಾಗುವುವು.

ಆರಧಿಕಮೂವತ್ತುರೂಪದಿ । ವಾರಿಜಾಪ್ತನೊಳಿರುತಿಹನು ಮಾ ।
ಯಾರಮಣ ಶ್ರೀವಾಸುದೇವನು ಕಾಲನಾಮದಲಿ ॥
ಮೂರುವಿಧ ಪಿತೃಗಳೊಳು ವಸು ತ್ರಿಪು । ರಾರಿಯಾದಿತ್ಯಗನಿರುದ್ಧನು ।
ತೋರಿಕೊಳ್ಳದೆ ಕರ್ತೃ ಕರ್ಮ ಕ್ರಿಯನೆನಿಸಿಕೊಂಬ ॥ ೨

ಸ್ವವಶನಾರಾಯಣನು ತಾ ಷ । ಣ್ಣವತಿನಾಮದಿ ಕರೆಸುತಲಿ ವಸು ।
ಶಿವ ದಿವಾಕರ ಕರ್ತೃಕರ್ಮಕ್ರಿಯೆಗಳೊಳಗಿದ್ದು ॥
ನೆವನವಿಲ್ಲದೆ ನಿತ್ಯದಲಿ ತ । ನ್ನವರು ಮಾಡುವ ಸೇವೆ ಕೈಗೊಂ ।
ಡವರ ಪಿತೃಗಳಿಗೀವನಂತಾನಂತ ಸುಖಗಳನು ॥ ೩

ತಂತುಪಟದಂದಲಿ ಲಕುಮಿ । ಕಾಂತ ಪಂಚಾತ್ಮಕನೆನಿಸಿ ವಸು ।
ಕಂತುಹರ ರವಿ ಕರ್ತೃಗಳೊಳಿದ್ದನವರತ ತನ್ನ ॥
ಚಿಂತಿಸುವ ಸಂತರನು ಗುರು ಮ । ಧ್ವಾಂತರಾತ್ಮಕ ಸಂತಯಿಸುವನು ।
ಸಂತತಖಿಲಾರ್ಥಗಳ ಪಾಲಿಸಿ ಇಹಪರಂಗಳಲಿ ॥ ೪

–ಪಿತೃಗಣ ಸಂಧಿ, ಹರಿಕಥಾಮೃತಸಾರ

# ಶ್ರಾದ್ಧದ ಅಡುಗೆ

**-ಹೆಚ್.ಸತ್ಯನಾರಾಯಣಾಚಾರ್ಯ**

ಶ್ರಾದ್ಧದಲ್ಲಿ ಎರಡು ಅಡುಗೆಯಾಗಬೇಕಾಗುತ್ತದೆ. ಒಳಗೆ ಕುಳಿತ ಬ್ರಾಹ್ಮಣರಿಗೆ ಅಥವಾ ಕೂರ್ಚಬ್ರಾಹ್ಮಣರ ಭೋಜನಕ್ಕೆ ಅರ್ಥಾತ್ ಪಿತೃ ಕಾರ್ಯಕ್ಕೆ ಉಪಯೋಗಿಸುವ ಅಡುಗೆ ಒಂದು. ಬಂದ ಸಂಬಂಧಿಗಳಿಗೆ ಭೂರಿಭೋಜನಕ್ಕಾಗಿ ಅಡುಗೆ ಇನ್ನೊಂದು.

ಒಳಗಿನ ಪಿತೃಕಾರ್ಯದ ಪಾಕದ ಬಗ್ಗೆ ಕೆಲವು ಅನುಸರಿಸಬೇಕಾದ ನಿಯಮಗಳಿವೆ.

೧. ಈ ಅಡುಗೆಯನ್ನು ತಾನು ಅಥವಾ ತನ್ನ ಪತ್ನಿಯೇ ಮಾಡುವುದು ಉತ್ತಮ. ತನ್ನ ಮಕ್ಕಳೂ, ಗೋತ್ರಜರೂ ಮಾಡಬಹುದು. ಆದರೆ ವಿಧವೆಯರು, ಸ್ನಾನ ಸಂಧ್ಯೆಗಳಿಲ್ಲದ ವ್ರಾತ್ಯರು, ಏಕಾದಶೀ ಉಪವಾಸಾದಿಗಳಿಲ್ಲದ ಅನಾಚಾರಿಗಳು ಶ್ರಾದ್ಧದ ಅಡುಗೆಯನ್ನು ಮಾಡಿದರೆ ಶ್ರಾದ್ಧವು ಭಗ್ನವಾಗುತ್ತದೆ.

೨. ಋತುಸ್ನಾತರಾದ ಸ್ತ್ರೀಯರು ಐದನೇ ದಿನದಿಂದ ಸ್ರಾವ ನಿಂತ ಮೇಲೆಯೇ ಶ್ರಾದ್ಧಪಾಕಕ್ಕೆ ಅರ್ಹರು. ಪಾಕ ಮಾಡುವವರು ಶಿರಸ್ನಾನಮಾಡಿ, ಮಡಿಯುಟ್ಟು, ಅಶುಚಿಗಳನ್ನು ಮುಟ್ಟಿಕೊಳ್ಳದೇ ಕಾಷ್ಠಾಗ್ನಿಯಲ್ಲಿ ಅಡುಗೆ ಮಾಡಬೇಕು.

೩. ಅಕ್ಕಿ, ಗೋಧಿ, ಉದ್ದು, ಹೆಸರುಬೇಳೆ, ಎಳ್ಳು ಇವು ಶ್ರಾದ್ಧದಲ್ಲಿ ಬಳಸಬೇಕಾದ ಧಾನ್ಯಗಳು, ಗೋಧಿಯಿಂದ ಪಿತೃಗಳಿಗೆ ವತ್ಸರ ಪರ್ಯಂತ ತೃಪ್ತಿ, ಉದ್ದಿನಬೇಳೆಯಿಂದ ಅಯನಪರ್ಯಂತ, ಹೆಸರುಬೇಳೆಯಿಂದ ಋತುಪರ್ಯಂತ.

ರಾಗಿ, ಜೋಳ, ಹುರುಳಿ, ತೊಗರಿಬೇಳೆಗಳು ನಿಷಿದ್ಧ. ಕಡಲೇಬೇಳೆಯು ಮಧ್ಯಮ.

೪. ಅರಿಶಿನ, ಏಲಕ್ಕಿ–ಲವಂಗ, ಕೊತ್ತಂಬರಿಬೀಜ, ಮೆಂತೆ, ಹುಣಸೇಹುಳಿ, ಹಸಿಮೆಣಸಿನಕಾಯಿ, ಕೆಂಪುಮೆಣಸಿನಕಾಯಿ ಮುಂತಾದ ಕಟುದ್ರವ್ಯಗಳು ಶ್ರಾದ್ಧದಡುಗೆಗೆ ನಿಷಿದ್ಧಗಳು.

೫. ಕಾಯಿಪಲ್ಲೆಗಳಲ್ಲಿ ಗೆಡ್ಡೆ–ಗೆಣಸು, ಬಾಳೆದಿಂಡು, ಬಾಳೆಕಾಯಿ, ಬಾಳೆಹೂವು (ಪೊಂಬೆ), ಸೌತೆ, ಹಾಗಲಕಾಯಿ, ಮಾವಿನಕಾಯಿ, ನೆಲ್ಲಿಕಾಯಿ, ಹಲಸಿನಕಾಯಿ, ತೆಂಗಿನಕಾಯಿ, ಕಾಳುಮೆಣಸು, ಶುಂಠಿ, ಹೀರೇಕಾಯಿ ಇವು ಶ್ರೇಷ್ಠ. ಕೊತ್ತಂಬರಿಸೊಪ್ಪು, ಕರಿಬೇವಿನ ಸೊಪ್ಪು ಉಪಯೋಗಿಸಬಹುದು. ಬೂದುಗುಂಬಳಕಾಯಿ, ಆಲೂಗೆಡ್ಡೆ, ಹುರಳೀಕಾಯಿ, ಸಿಹಿಕುಂಬಳ, ದಪ್ಪಮೆಣಸಿನಕಾಯಿ, ಬೆಂಡೇಕಾಯಿ, ಬಟಾಣಿ, ಸೊಪ್ಪುಗಳು ಶ್ರಾದ್ಧಪಾಕಕ್ಕೆ ನಿಷಿದ್ಧಗಳು. ಶ್ರಾದ್ಧದಂದು ಬೂದುಗುಂಬಳಕಾಯಿಯನ್ನು ಬಳಸಲೇಬೇಕೆಂಬ ಕೆಲವೆಡೆಯ ಸಂಪ್ರದಾಯದ ಬಗ್ಗೆ ಚಿಂತನೆ ಅಗತ್ಯ.

೬. ಹಣ್ಣುಗಳಲ್ಲಿ ಬಾಳೆಹಣ್ಣು, ಮಾವಿನಹಣ್ಣು, ಹಲಸಿನಹಣ್ಣು, ಕರಬೂಜದ ಹಣ್ಣು, ದ್ರಾಕ್ಷಿ, ನೇರಳೇಹಣ್ಣು ಇವು ಶ್ರೇಷ್ಠ. ಕಿತ್ತಳೆಯೂ ಆಗಬಹುದು. ಬೀಜ ಪ್ರಧಾನವಾದ ದಾಳಿಂಬೆ, ಸೀಬೆ, ಸೀತಾಫಲ ಇಂಥವು ನಿಷಿದ್ಧ. ಒಣದ್ರಾಕ್ಷಿ, ಖರ್ಜೂರಗಳನ್ನು ಉಪಯೋಗಿಸಬಹುದು. ಬಾದಾಮಿ, ಅಂಜೂರ, ಗಸಗಸೆ, ಇಂಗು ಇವುಗಳನ್ನು ಉಪಯೋಗಿಸಕೂಡದು. ಗೋಡಂಬಿ ಮಧ್ಯಮ.

೭. ಶ್ರಾದ್ಧಕ್ಕಾಗಿ ಎಣ್ಣೆ ಅಥವಾ ತುಪ್ಪದಲ್ಲಿ ಕರಿದ (ಅಪೂಪ, ವಡೆ) ಪದಾರ್ಥಗಳನ್ನು ಮಾಡಲೇಬೇಕು. ಕಡಲೇ ಎಣ್ಣೆಗಿಂತ ತೆಂಗಿನೆಣ್ಣೆ ಶ್ರೇಷ್ಠ. ಪಾಯಸಕ್ಕಾಗಿ ಗೋಧಿ, ಸಜ್ಜೆ, ಹೆಸರು ಬೇಳೆಗಳು ಪ್ರಶಸ್ತ.

೮. ಶ್ರಾದ್ಧಕ್ಕೆ ಬೇಕಾದ ಭಕ್ಷ್ಯಗಳನ್ನು ಹಿಂದಿನ ದಿನ ಮಾಡಿಡುವಂತಿಲ್ಲ. ತರಕಾರಿಗಳನ್ನು ಹಿಂದಿನ ದಿನ ಹೆಚ್ಚಿಡಕೂಡದು. ಶ್ರಾದ್ಧದಂದೇ ಬೆಳಿಗ್ಗೆ ಸ್ನಾನಮಾಡಿ ಕಾಯಿಪಲ್ಲೆ ಹೆಚ್ಚಬೇಕು. ಕ್ಷಣಭೋಜನಕ್ಕೆ ಮುಂಚೆ

ಕಾಯಿಪಲ್ಯದ ಸಿಪ್ಪೆ ಮುಂತಾದವುಗಳನ್ನು ಹೊರಗೆ ಚೆಲ್ಲಬಾರದೆಂಬ ಸಂಪ್ರದಾಯವಿದೆ.

೯. ಎಮ್ಮೆಯ ಹಾಲು, ಮೊಸರು, ತುಪ್ಪಗಳನ್ನು ಉಪಯೋಗಿಸಬಾರದು. ಗವ್ಯಗಳೇ ಆಗಬೇಕು. ಶ್ರಾದ್ಧಪಾಕವಸ್ತುಗಳ ಬಗ್ಗೆ ದೇಶಸಂಪ್ರದಾಯಗಳು ಬೇರೆ ಬೇರೆಯಾಗಿವೆ. ಎಲ್ಲಕ್ಕಿಂತ ಮುಖ್ಯವಾಗಿ ಸಾತ್ವಿಕವಸ್ತುಗಳನ್ನಷ್ಟೇ ಶ್ರಾದ್ಧಪಾಕದಲ್ಲಿ ಉಪಯೋಗಿಸಬೇಕು. ಚಾತುರ್ಮಾಸ್ಯ ವ್ರತಕಾಲದಲ್ಲಿ ಆಯಾ ವ್ರತಕ್ಕೆ ಚ್ಯುತಿಬರದಂತೆ ಅಡುಗೆ ಮಾಡಬೇಕು.

## ಶ್ರಾದ್ಧಲೋಪವಾದರೆ

ಶ್ರಾದ್ಧದ ದಿನದಂದು ಪ್ರಮಾದದಿಂದ ಶ್ರಾದ್ಧಮಾಡದೇ ಆಹಾರವನ್ನು ಸ್ವೀಕರಿಸಿ ಆಗ ಈ ದಿನ ಶ್ರಾದ್ಧವೆಂದು ಸ್ಮೃತವಾದರೆ, ನೆನಪಾದ ಮೇಲೆ ಮತ್ತೇನನ್ನೂ ಸ್ವೀಕರಿಸದೇ ಉಪವಾಸವಿದ್ದು ಮರುದಿನ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧದಿನ ಕಳೆದು ಕೆಲ ದಿವಸಗಳ ನಂತರ ಸ್ಮೃತವಾದರೆ ಮುಂದೆ ಒದಗುವ ಅಮಾವಾಸ್ಯೆಯಂದು ಪವಮಾನ ಪ್ರಾಯಶ್ಚಿತ್ತದೊಡನೆ ಶ್ರಾದ್ಧ ಮಾಡುವಂತೆ ಹಿರಿಯರು ಆದೇಶಿಸುತ್ತಾರೆ. ಕೆಲವು ಶಿಷ್ಟರು ಹೇಳುವಂತೆ ಆ ವರ್ಷದ ಶ್ರಾದ್ಧವನ್ನು ಮತ್ತೆಂದೂ ಮಾಡುವಂತಿಲ್ಲ. ಮುಂದಿನ ವರ್ಷ ಮೃತತಿಥಿಯಲ್ಲಿ ಶ್ರಾದ್ಧ ಮಾಡುವಾಗ, ಹಿಂದಿನ ದಿನ ಉಪವಾಸವಿದ್ದು ವಿಪ್ರರ ಮುಂದೆ ಶ್ರಾದ್ಧಲೋಪದ ವಿಷಯ ತಿಳಿಸಿ ಶ್ರಾದ್ಧವನ್ನು ಮುಂದುವರೆಸಲು ಅಪ್ಪಣೆಯನ್ನು ಕೇಳಬೇಕು. ಅನುಜ್ಞೆ ಪಡೆದು ಕ್ರಮಪ್ರಕಾರ ಶ್ರಾದ್ಧಾನುಷ್ಠಾನ ಮಾಡಬೇಕು.

❖ ತೌಳವ ಸಂಪ್ರದಾಯದಲ್ಲಿ ಇಂತಹ ಸ್ಥಿತಿಯಲ್ಲಿ ಶ್ರಾದ್ಧದಂದು ಪವಮಾನ–ಪ್ರಾಯಶ್ಚಿತ್ತ ಹೋಮವನ್ನು ಮಾಡಿಕೊಂಡು ಶ್ರಾದ್ಧ ಮಾಡುತ್ತಾರೆ. ತಿಳುವಳಿಕೆಯಿಲ್ಲದೇ ಅನೇಕವರ್ಷ ಶ್ರಾದ್ಧಲೋಪಮಾಡಿ ದೈವಪ್ರೇರಣೆಯಿಂದ ತಿಳಿವು ಪಡೆದು ಆಚರಿಸಬಯಸಿದವರಿಗೂ ಇದೇ ರೀತಿಯ ಪ್ರಾಯಶ್ಚಿತ್ತ. ತೌಳವಪದ್ಧತಿಯಂತೆ ಒಟ್ಟಿಗೇ ಶ್ರಾದ್ಧ

ಮಾಡುತ್ತಿದ್ದ ಅಣ್ಣತಮ್ಮಂದಿರು ಒಂದು ವರ್ಷ ಅನಿವಾರ್ಯ ಕಾರಣಗಳಿಂದ ಬೇರೆಬೇರೆಯಾಗಿ ಶ್ರಾದ್ಧಮಾಡಿ, ಮತ್ತೆ ಒಟ್ಟಿಗೆ ಶ್ರಾದ್ಧ ಮಾಡುವುದಾದರೂ ಪವಮಾನ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾರೆ.

**ಷಣ್ಣವತಿ ಶ್ರಾದ್ಧ**

ವರ್ಷದಲ್ಲಿ ಸಾಂವತ್ಸರಿಕಶ್ರಾದ್ಧವಲ್ಲದೇ ತೊಂಬತ್ತಾರು ಪಿತೃದಿನಗಳಿವೆ. ಈ ದಿನಗಳಲ್ಲಿ ತಿಲತರ್ಪಣವು ಶ್ರಾದ್ಧವೆನಿಸುತ್ತದೆ. ಈ ೯೬ ದಿನಗಳನ್ನೇ ಷಣ್ಣವತಿಶ್ರಾದ್ಧದಿನಗಳು ಎನ್ನಲಾಗುತ್ತದೆ. ಅವು ಯಾವುವೆಂದರೆ—

| | |
|---|---|
| ದರ್ಶ (ಅಮಾವಾಸ್ಯೆ) | ೧೨ |
| ಸಂಕ್ರಮಣ | ೧೨ |
| ವ್ಯತೀಪಾತ | ೧೩ |
| ವೈಧೃತಿ | ೧೩ |
| ಮನ್ವಾದಿ | ೧೪ |
| ಯುಗಾದಿ | ೦೪ |
| ಮಹಾಲಯ | ೧೬ |
| ತಿಸ್ರೋಷ್ಟಕ ೪+೩ | ೧೨ |
| ಒಟ್ಟು | ೯೬ |

ದರ್ಶ– 'ದರ್ಶಃ ಸೂರ್ಯೇಂದುಸಂಗಮಃ' ಸೂರ್ಯಚಂದ್ರರು ಒಂದೇ ರಾಶಿಯಲ್ಲಿರುವ ದಿನ ದರ್ಶ. ಅಮಾವಾಸ್ಯೆಯು ಕನಿಷ್ಠ ಹನ್ನೆರಡು ಘಳಿಗೆಯುಳ್ಳ ದಿನದಂದು ''ದರ್ಶಶ್ರಾದ್ಧ''. ಕೆಲವರ ಪ್ರಕಾರ ೧೮ ರಿಂದ ೨೪ ಘಳಿಗೆ ದರ್ಶ ಬೇಕು.

ಸಂಕ್ರಮಣ–ಮೇಷಾದಿ ಹನ್ನೆರಡು ಸಂಕ್ರಮಣಗಳನ್ನು ಅದರ ಪುಣ್ಯ ಕಾಲವನ್ನೂ ಪಂಚಾಂಗಗಳು ಉಲ್ಲೇಖಿಸಿರುತ್ತವೆ. ಸಂಕ್ರಮಣಪುಣ್ಯಕಾಲದಲ್ಲಿ ತರ್ಪಣ.

ವ್ಯತೀಪಾತ, ವೈಧೃತಿ–ವಿಷ್ಕಂಭಾದಿ ೨೭ ಯೋಗಗಳಲ್ಲಿ ಇವು ಎರಡು ಪಿತೃಸಂಬಂಧಿಪರ್ವಯೋಗಗಳು. ೨೭ ದಿನಕ್ಕೊಮ್ಮೆ ಈ ಯೋಗಗಳು ಪುನರಾವರ್ತನೆಗೊಂಡು ವರ್ಷಕ್ಕೆ ಕನಿಷ್ಠ ಹದಿಮೂರುಬಾರಿ ಬರುತ್ತವೆ. ಸೂರ್ಯೋದಯದಿಂದ ಕನಿಷ್ಠ ೬ ಘಳಿಗೆ ಈ ಯೋಗಗಳಿದ್ದರೆ ಅಂದು ತರ್ಪಣ. ಅದಕ್ಕಿಂತ ಕಡಿಮೆ ಇದ್ದರೆ ಹಿಂದಿನ ದಿನ ಗ್ರಾಹ್ಯ.

ಮನ್ವಾದಿ–ಹದಿನಾಲ್ಕು ಮನ್ವಂತರದ ಆರಂಭದ ದಿನಗಳು ಮನ್ವಾದಿ ಪರ್ವಕಾಲಗಳು. ಅವು ಯಾವುವೆಂದರೆ—

೧. ಚೈತ್ರಶುಕ್ಲತೃತೀಯಾ
೨. ಚೈತ್ರ ಪೂರ್ಣಿಮಾ
೩. ಜ್ಯೇಷ್ಠಶುಕ್ಲ ಪೂರ್ಣಿಮಾ
೪. ಆಷಾಢಶುಕ್ಲ ದಶಮೀ
೫. ಆಷಾಢಶುಕ್ಲ ಪೂರ್ಣಿಮಾ
೬. ಶ್ರಾವಣ ಕೃಷ್ಣಾಷ್ಟಮೀ
೭. ಭಾದ್ರಪದಶುಕ್ಲ ತೃತೀಯಾ
೮. ಆಶ್ವಯುಜ ಶುಕ್ಲನವಮೀ
೯. ಕಾರ್ತಿಕ ಶುಕ್ಲದ್ವಾದಶೀ
೧೦. ಕಾರ್ತಿಕಪೂರ್ಣಿಮಾ
೧೧. ಪುಷ್ಯಶುಕ್ಲೈಕಾದಶೀ
೧೨. ಮಾಘಶುಕ್ಲಸಪ್ತಮೀ
೧೩. ಫಾಲ್ಗುನ ಪೂರ್ಣಿಮಾ
೧೪. ಫಾಲ್ಗುನ ಅಮಾವಾಸ್ಯೆ

ಶುಕ್ಲಪಕ್ಷದ ಮನ್ವಾದಿಗಳಲ್ಲಿ ಪೂರ್ವಾಹ್ಣದಲ್ಲೂ, ಕೃಷ್ಣಪಕ್ಷದ ಮನ್ವಾದಿಗಳಲ್ಲಿ ಅಪರಾಹ್ಣದಲ್ಲೂ ಪಿತೃತರ್ಪಣವು ಪ್ರಶಸ್ತ.

ಯುಗಾದಿ– ಕಾರ್ತಿಕಶುಕ್ಲನವಮೀ –ಕೃತ ಯುಗಾದಿ

ವೈಶಾಖಶುಕ್ಲತೃತೀಯಾ – ತ್ರೇತಾಯುಗಾದಿ

ಮಾಘ ಅಮಾವಾಸ್ಯೆ – ದ್ವಾಪರ ಯುಗಾದಿ

ಈ ನಾಲ್ಕು ಯುಗಾದಿಗಳಲ್ಲೂ ಮನ್ವಾದಿಗಳಲ್ಲಿ ಹೇಗೋ ಹಾಗೆ ಶುಕ್ಲಪಕ್ಷದಲ್ಲಿ ಪೂರ್ವಾಹ್ಣ, ಕೃಷ್ಣಪಕ್ಷದಲ್ಲಿ ಅಪರಾಹ್ಣ ತರ್ಪಣಕಾಲ.

# ಮಹಾಲಯ

ಭಾದ್ರಪದಮಾಸದ ಕೃಷ್ಣಪಕ್ಷ ಮಹಾಲಯ ಪಕ್ಷ ಅಥವಾ ಪಿತೃಪಕ್ಷ. ಈ ಹದಿನೈದು ದಿನಗಳ ಜೊತೆಗೆ ಶುಕ್ಲಪ್ರತಿಪತ್ ಸೇರಿ ಹದಿನಾರು ದಿನಗಳು ಷಣ್ಣವತಿಯಲ್ಲಿ ಸೇರಿವೆ. ಈ ಎಲ್ಲಾ ದಿನಗಳಲ್ಲೂ ಪಿಂಡಪ್ರದಾನ ಮಾಡಿ ಶ್ರಾದ್ಧ ಮಾಡಬಹುದು. ಈ ಪಕ್ಷದ ಯಾವುದಾದರೂ ಒಂದು ದಿನ ಶ್ರಾದ್ಧ ಮಾಡುವುದು ಮಧ್ಯಮಕಲ್ಪ. ಇದಕ್ಕೆ 'ಸಕೃನ್ಮಹಾಲಯಶ್ರಾದ್ಧ' ಎಂದು ಹೆಸರು. ಇಲ್ಲಿ ಪಿಂಡದಾನ ಅಪೇಕ್ಷಿತ.

**ಮಹಾಲಯೇ ಗಯಾಶ್ರಾದ್ಧೇ ಮಾತಾಪಿತ್ರೋರ್ಮೃತೇಽಹನಿ ।**
**ಪಿಂಡಮಿಚ್ಛಂತಿ ಪಿತರಃ ಪಿಂಡಹೀನಂ ನ ಕಾರಯೇತ್ ॥**

ಸಕೃನ್‌ಮಹಾಲಯಶ್ರಾದ್ಧ, ಗಯಾಶ್ರಾದ್ಧ ಹಾಗೂ ಸಾಂವತ್ಸರಿಕಶ್ರಾದ್ಧಗಳಲ್ಲಿ ಪಿಂಡದಾನವು ಅವಶ್ಯಕರ್ತವ್ಯ. ಉಳಿದ ದಿನಗಳಲ್ಲಿ ತರ್ಪಣಶ್ರಾದ್ಧ ಮಾಡಿದರೆ ಸಾಕು.

## ಪಿತೃಪಕ್ಷ–ಮಹಾಲಯ

ಸಂವತ್ಸರ ಪೂರ್ತಿ ಪಿತೃದೇವತೆಗಳು ಸಂತುಷ್ಟರಾಗಿರಬೇಕಾದರೆ ಭಾದ್ರಪದ ಕೃಷ್ಣಪಕ್ಷದಲ್ಲಿ ಒಂದು ದಿನವಾದರೂ ಶ್ರಾದ್ಧ ಹಾಕಬೇಕು.

**ಯೋ ವೈ ಶ್ರಾದ್ಧಂ ನರಃ ಕುರ್ಯಾತ್ ಏಕಸ್ಮಿನ್ನಪಿ ವಾಸರೇ ।**
**ತಸ್ಯ ಸಂವತ್ಸರಂ ಯಾವತ್ ಸಂತೃಪ್ತಾಃ ಪಿತರೋ ಧ್ರುವಮ್ ॥**

ಭಾದ್ರಪದ ಮಾಸದ ಕೃಷ್ಣಪ್ರತಿಪತ್‌ನಿಂದ ಅಶ್ವಯುಜ ಪಾಡ್ಯದ ತನಕದ ೧೬ ದಿನಗಳು ಮಹಾಲಯ ತಿಥಿಗಳು ಎಂದು ಕರೆಸಿಕೊಂಡಿವೆ. ಈ ಪಕ್ಷದಲ್ಲಿ ಪಿತೃಗಳು ಪಿಂಡವನ್ನು ಬಯಸುತ್ತಾರೆ.

## ಸಕೃನ್ಮಹಾಲಯಶ್ರಾದ್ಧ

ಪಿತೃಪಕ್ಷದ ಹದಿನೈದು ದಿನಗಳಲ್ಲಿ ಯಾವುದಾದರೊಂದು ದಿನ ಮಾತ್ರ ಪಿಂಡಪ್ರದಾನದೊಂದಿಗೆ ಮಾಡುವ ಶ್ರಾದ್ಧವನ್ನು 'ಸಕೃನ್ಮಹಾಲಯ'

ಎನ್ನಲಾಗುತ್ತದೆ. ಸಕೃನ್ಮಹಾಲಯ ಮಾಡುವುದರಿಂದ ಯಾವುದಾದರೊಂದು ದಿನ ಮಾಡುವುದಲ್ಲ. ತಂದೆಯ ಮೃತ ತಿಥಿಯಲ್ಲಿ ಮಾಡಬೇಕು. ಅಂದರೆ ಮಾಘಶುಕ್ಲಪಂಚಮಿಯಂದು ತಂದೆಯ ಮೃತತಿಥಿಯಾದರೆ ಪಿತೃಪಕ್ಷದ ಪಂಚಮಿಯಂದು ಮಹಾಲಯಶ್ರಾದ್ಧ. ಇದಕ್ಕೆ ವಾರ–ನಕ್ಷತ್ರಾದಿ ಯಾವ ನಿಷೇಧವೂ ಇಲ್ಲ. ಏಕೆಂದರೆ ಮೃತತಿಥಿಶ್ರೇಷ್ಠ. ಮೃತತಿಥಿಯಂದು ಅನನುಕೂಲವಿದ್ದು ಬೇರೆ ದಿನ ಮಾಡುವುದಾದರೆ ಭರಣೀನಕ್ಷತ್ರ (ಯಮನಕ್ಷತ್ರ)ದಂದು ಅಥವಾ ಮಹಾಲಯ ಅಮಾವಾಸ್ಯೆಯಂದು ಮಾಡಬೇಕು. ಉಳಿದಂತೆ ಕೃತ್ತಿಕಾ, ರೋಹಿಣೀ, ಮಘಾ ನಕ್ಷತ್ರಗಳು, ಸ್ವಜನ್ಮನಕ್ಷತ್ರ, ಸಪ್ತಮೀ, ತ್ರಯೋದಶೀ ತಿಥಿಗಳೂ, ರವಿ ಶುಕ್ರ ಮಂಗಳವಾರಗಳಂದು ಮಹಾಲಯವನ್ನು ಮಾಡಕೂಡದು.

**ನಂದಾಯಾಂ ಭಾರ್ಗವದಿನೇ ತ್ರಯೋದಶ್ಯಾಂ ತ್ರಿಜನ್ಮಸು ।**
**ಏಷು ಶ್ರಾದ್ಧಂ ನ ಕುರ್ವೀತ ಗೃಹೀ ಪುತ್ರಧನಕ್ಷಯಮ್ ॥**

**ಪ್ರಾಜಾಪತ್ಯೇ ಚ ಪೌಷ್ಣೇ ಚ ಪಿತ್ರರ್ಕ್ಷೇ ಭಾರ್ಗವೇ ತಥಾ ।**
**ಯಸ್ತು ಶ್ರಾದ್ಧಂ ಪ್ರಕುರ್ವೀತ ತಸ್ಯ ಪುತ್ರಸ್ಯ ಸಂಕ್ಷಯಃ ॥**

ತ್ರಯೋದಶ್ಯಾದಿಗಳು ಮೃತತಿಥಿಯಾಗಿದ್ದಾಗ ಈ ನಿಷೇಧವಿಲ್ಲ. ಹೀಗಿದ್ದೂ ಚತುರ್ದಶೀತಿಥಿಯು ಮೃತತಿಥಿಯಾಗಿದ್ದರೂ ಘಾತಚತುರ್ದಶಿಯಂದು ಸಕೃನ್ಮಹಾಲಯ ಪಿಂಡಪ್ರದಾನವಿಲ್ಲ. ಬೇರೆ ದಿನ ಮಾಡಬೇಕು. ಚತುರ್ದಶಿಯಂದು ಅಪಘಾತ, ಶಸ್ತ್ರಾಸ್ತ್ರ, ವಿಷ, ನೇಣು, ಕುಷ್ಠಾದಿಗಳಿಂದ ಮೃತರಾದವರಿಗೆ ಮಾತ್ರ ಶ್ರಾದ್ಧ ಮಾಡಬೇಕು.

# ಸಂಕಲ್ಪ

ಆಷಾಢ್ಯಾದಿಪಂಚಮಾಪರಪಕ್ಷೇ ಭಾದ್ರಪದಕೃಷ್ಣಪಕ್ಷೇ ಅಮಾವಾಸ್ಯಾಯಾಂ (ಆ ದಿನದ ತಿಥಿಯ ಉಲ್ಲೇಖ) ಪುಣ್ಯತಿಥೌ ಸರ್ವಪಿತ್ರಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಲಕ್ಷ್ಮೀಜನಾರ್ದನಪ್ರೇರಣಯಾ

ಲಕ್ಷ್ಮೀ ಜನಾರ್ದನಪ್ರೀತ್ಯರ್ಥಂ ಪಿತೃ–ಪಿತಾಮಹ–ಪ್ರಪಿತಾಮಹಾನಾಂ... ನಾಮ್ನಾಂ (ಕಾಶ್ಯಪ) ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ–ಸಂಕರ್ಷಣ–ವಾಸುದೇವಾನಾಂ, ಮಾತೃ–ಪಿತಾಮಹೀ–ಪ್ರಪಿತಾಮಹೀನಾಂ ...ನಾಮ್ನೀನಾಂ (ಕಾಶ್ಯಪ) ಗೋತ್ರಾಣಾಂ ವಸುರುದ್ರಾದಿತ್ಯರೂಪಾಣಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ–ಸಂಕರ್ಷಣ–ವಾಸುದೇವಾನಾಂ, ಮಾತಾಮಹ–ಮಾತುಃಪಿತಾಮಹ–ಮಾತುಃಪ್ರಪಿತಾಮಹಾನಾಂ–ನಾಮ್ನಾಂ (ಕಾಶ್ಯಪ) ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ–ಸಂಕರ್ಷಣ–ವಾಸುದೇವಾನಾಂ, ಮಾತಾಮಹಿ–ಮಾತುಃಪಿತಾಮಹಿ–ಮಾತುಃಪ್ರಪಿತಾಮಹೀನಾಂ....ನಾಮ್ನೀನಾಂ (ಕಾಶ್ಯಪ) ಗೋತ್ರಾಣಾಂ ವಸುರುದ್ರಾದಿತ್ಯಸ್ವರೂಪಾಣಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಗೋತ್ರಾಣಾಂ ವಸುರುದ್ರಾದಿತ್ಯ ಸ್ವರೂಪಾಣಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ–ಸಂಕರ್ಷಣ–ವಾಸುದೇವಾನಾಂ, ತಥಾ ಜ್ಯೇಷ್ಠಪಿತೃವ್ಯಾದಿ ಸಮಸ್ತಕಾರುಣ್ಯಪಿತೃಣಾಂ ಅಕ್ಷಯ್ಯತೃಪ್ತ್ಯರ್ಥಂ ಮಹಾಲಯಶ್ರಾದ್ಧಪ್ರತಿನಿಧಿ ತ್ವೇನ ತಿಲತರ್ಪಣಾಖ್ಯಂ ಕರ್ಮ ಕರಿಷ್ಯೇ।

## ಪಿತೃ ಪ್ರಾರ್ಥನೆ

**ಅಮೂರ್ತಾನಾಂ ಸುಮೂರ್ತಾನಾಂ ಪಿತೃಣಾಂ ದೀಪ್ತತೇಜಸಾಮ್ ।**
**ನಮಸ್ಯಾಮಿ ಸದಾ ತೇಷಾಂ ಧ್ಯಾಯಿನಾಂ ಯೋಗಚಕ್ಷುಷಾಮ್ ॥**

**ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।**
**ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋ ನಮಃ ॥**

**ತರ್ಪಣ :** ನಿರ್ಮಾಲ್ಯತುಳಸಿ, ಎರಡು ದರ್ಭೆ ಮತ್ತು ಎಳ್ಳು ಹಿಡಿದುಕೊಂಡು ದಕ್ಷಿಣಕ್ಕೆ ಮುಖಮಾಡಿ ತೋರುಬೆರಳು ಮತ್ತು ಅಂಗುಷ್ಠದ ಮಧ್ಯದಿಂದ (ಪಿತೃತೀರ್ಥದಿಂದ) ತರ್ಪಣ ಕೊಡಬೇಕು. ಉಪವೀತ ಎಡಕ್ಕಿರಬೇಕು.

೧. ಅಸ್ಮತ್ ಪಿತರಂ....ಶರ್ಮಾಣಂ.....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨. ಅಸ್ಮತ್ ಪಿತಾಮಹಂ.....ಶರ್ಮಾಣಂ ....ಗೋತ್ರಂ ರುದ್ರರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩. ಅಸ್ಮತ್ ಪ್ರಪಿತಾಮಹಂ....ಶರ್ಮಾಣಂ ....ಗೋತ್ರಂ ಆದಿತ್ಯ ರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೪. ಅಸ್ಮನ್ಮಾತರಂ (ತಾಯಿ) ...ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ

೫. ಪಿತಾಮಹೀಂ (ತಂದೆಯ ತಾಯಿ) ....ನಾಮ್ನೀಂ...ಗೋತ್ರಾಂ ರುದ್ರರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೬. ಪ್ರಪಿತಾಮಹೀಂ (ತಂದೆಯ ತಂದೆಯ ತಾಯಿ)....ನಾಮ್ನೀಂ ....ಗೋತ್ರಾಂ ಆದಿತ್ಯರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೭. ಸಾಪತ್ನಜನನೀಂ (ಸವತಿತಾಯಿ) ...ನಾಮ್ನೀಂ...ಗೋತ್ರಾಂ

ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೮. ಮಾತಾಮಹಂ (ತಾಯಿಯ ತಂದೆ) ....ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೯. ಮಾತುಃ ಪಿತಾಮಹಂ (ತಾಯಿಯ ತಂದೆಯ ತಂದೆ) ....ಶರ್ಮಾಣಂ...ಗೋತ್ರಂ ರುದ್ರರೂಪಂ ತದಂತರ್ಯಾಮಿ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೦. ಮಾತುಃ ಪ್ರಪಿತಾಮಹಂ (ತಾಯಿಯ ತಂದೆಯ ತಂದೆಯ ತಂದೆ) ....ಶರ್ಮಾಣಂ....ಗೋತ್ರಂ ಆದಿತ್ಯರೂಪಂ ತದಂತರ್ಯಾಮಿ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೧. ಮಾತಾಮಹೀಂ (ತಾಯಿಯ ತಾಯಿ) ....ನಾಮ್ನೀಂ ....ಗೋತ್ರಾಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೨. ಮಾತುಃ ಪಿತಾಮಹೀಂ (ತಾಯಿಯ ತಂದೆಯ ತಾಯಿ) ....ನಾಮ್ನೀಂ ....ಗೋತ್ರಾಂ ರುದ್ರರೂಪಾಂ ತದಂತರ್ಯಾಮಿ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೩. ಮಾತುಃ ಪ್ರಪಿತಾಮಹೀಂ (ತಾಯಿಯ ತಂದೆಯ ತಂದೆಯ ತಾಯಿ) ....ನಾಮ್ನೀಂ....ಗೋತ್ರಾಂ ಆದಿತ್ಯರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೪. ಆತ್ಮಪತ್ನೀಂ (ಹೆಂಡತಿ) ....ನಾಮ್ನೀಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೫. ಅಸ್ಮತ್ಸುತಂ (ಮಗ–ಸೋದರರನ ಮಗ) ....ಶರ್ಮಾಣಂ.... ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೬. ಭ್ರಾತರಂ (ಸಹೋದರ) ....ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೭. ಭ್ರಾತೃಪತ್ನಿಂ (ಸೋದರನ ಹೆಂಡತಿ) ....ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೮. ಭ್ರಾತೃಪುತ್ರಂ (ಸೋದರನ ಮಗ) ....ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೧೯. ಪಿತೃವ್ಯಂ(ತಂದೆಯ ಸಹೋದರರು) ...ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೦. ಪಿತೃವ್ಯಪತ್ನೀಂ (ಚಿಕ್ಕಪ್ಪ ದೊಡ್ಡಪ್ಪಂದಿರ ಪತ್ನಿ) ....ನಾಮ್ನೀಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೧. ಪಿತೃವ್ಯಪುತ್ರಂ (ಅವರ ಮಗ) ....ಶರ್ಮಾಣಂ....ಗೋತ್ರಂ

ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೨. ಮಾತುಲಂ (ಸೋದರಮಾವ) ....ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೩. ತತ್ಪತ್ನೀಂ (ಸೋದರಮಾವನಹೆಂಡತಿ) ....ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೪. ತತ್ ಪುತ್ರಂ (ಸೋದರಮಾವನ ಮಗ) ....ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೫. ದುಹಿತರಂ (ಮಗಳು) ...ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೬. ತದ್ಭರ್ತಾರಂ (ಅಳಿಯ)...ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೭. ಭಗಿನೀಂ(ಸೋದರಿ) ...ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೮. ದೌಹಿತ್ರಂ (ಮಗಳ ಮಗ) ...ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೨೯. ದೌಹಿತ್ರೀಂ (ಮಗಳ ಮಗಳು) ...ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೦. ಭಾಗಿನೇಯಕಂ (ಸೋದರಳಿಯ-ಸಹೋದರಿಯ ಮಗ) ...ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೧. ಪಿತೃಷ್ವಸಾರಂ (ಸೋದರತ್ತೆ) ...ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೨. ತದ್ಭರ್ತಾರಂ(ಸೋದರತ್ತೆಯ ಗಂಡ) ...ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೩. ತತ್ಸುತಂ (ಸೋದರತ್ತೆಯ ಮಗ) ...ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿತರ್ಪಯಾಮಿ ತರ್ಪಯಾಮಿ ।

೩೪.ಮಾತೃಷ್ವಸಾರಂ(ತಾಯಿಯ ಸೋದರಿ)...ನಾಮ್ನೀಂ... ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೫. ತದ್ಭರ್ತಾರಂ (ಆಕೆಯ ಪತಿ) ....ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೬. ತತ್ಪುತ್ರಂ(ಆಕೆಯ ಪುತ್ರ)...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೭. ಶ್ವಶುರಂ (ಹೆಣ್ಣುಕೊಟ್ಟ ಮಾವ) ...ಶರ್ಮಾಣಂ....ಗೋತ್ರಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೮. ಶ್ವಶ್ರೂಂ (ಹೆಣ್ಣು ಕೊಟ್ಟ ಅತ್ತೆ) ...ನಾಮ್ನೀಂ....ಗೋತ್ರಾಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೩೯. ಸ್ಯಾಲಕಂ (ಭಾವಮೈದುನ-ಹೆಂಡತಿಯ ಅಣ್ಣತಮ್ಮ) ...ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೪೦. ತತ್ಪತ್ನೀಂ (ಭಾವನ ಹೆಂಡತಿ) ...ನಾಮ್ನೀಂ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೪೧. ಭಾವುಕಂ (ಸೋದರಿಯ ಗಂಡ) ...ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೪೨. ಗುರುಂ (ಗುರುಕುಲದಲ್ಲಿ ಪೋಷಿಸಿದವ) ...ಶರ್ಮಾಣಂ ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿತರ್ಪಯಾಮಿ ತರ್ಪಯಾಮಿ ।

೪೩. ಗುರುಪತ್ನಿಂ (ಗುರುಕುಲದಲ್ಲಿ ಅನ್ನಹಾಕಿದವಳು) ...ನಾಮ್ನೀಂ ....ಗೋತ್ರಾಂ ವಸುರೂಪಾಂ ತದಂತರ್ಯಾಮಿ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೪೪. ಆಚಾರ್ಯಂ (ವೇದಾಂತವನ್ನು ಪಾಠಮಾಡಿದವ) ...ಶರ್ಮಾಣಂ....ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

೪೫. ಸಖಾಯಂ (ಗೆಳೆಯ)...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

# ಯಮತರ್ಪಣ

ಪ್ರಾಚೀನಾವೀತಿಯಾಗಿ ಅಂಗುಲ್ಯಗ್ರದಿಂದ ಪೂರ್ವಾಭಿಮುಖವಾಗಿ ಯಮತರ್ಪಣ, ಪಿತೃಪತಿಯಾದ್ದರಿಂದ ಪ್ರಾಚೀನಾವೀತಿಯಾಗಿಯೂ ದೇವತೆಯಾದ್ದರಿಂದ ಪೂರ್ವಾಭಿಮುಖವಾಗಿ ಅಂಗುಲ್ಯಗ್ರದೇವತೀರ್ಥ ದಿಂದಲೂ ಯಮತರ್ಪಣ ಕೊಡಬೇಕು.

ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ ತರ್ಪಯಾಮಿ । ಅಂತಕಂ ತರ್ಪಯಾಮಿ । ವೈವಸ್ವತಂ ತರ್ಪಯಾಮಿ । ಕಾಲಂ ತರ್ಪಯಾಮಿ । ಸರ್ವಭೂತಕ್ಷಯಂ ತರ್ಪಯಾಮಿ । ಔದುಂಬರಂ ತರ್ಪಯಾಮಿ । ದಧ್ನಂ ತರ್ಪಯಾಮಿ । ನೀಲಂ ತರ್ಪಯಾಮಿ। ಪರಮೇಷ್ಠಿನಂ ತರ್ಪಯಾಮಿ । ವೃಕೋದರಂ ತರ್ಪಯಾಮಿ । ಚಿತ್ರಂ ತರ್ಪಯಾಮಿ । ಚಿತ್ರಗುಪ್ತಂ ತರ್ಪಯಾಮಿ ।

ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ ।

ಪ್ರೇತಾಧಿಪೋ ದತ್ತಕೃತಾನುಸಾರೀ ಕೃತಾಂತ ಏತದ್ದಶಕೃಜ್ಜಪಂತಿ ।

ಈ ಶ್ಲೋಕಗಳನ್ನು ದಕ್ಷಿಣಾಭಿಮುಖವಾಗಿ ಹತ್ತುಬಾರಿ ಅಥವಾ ಮೂರು ಬಾರಿ ಹೇಳಬೇಕು.

**ಸರ್ವಪಿತೃತರ್ಪಣ**

ಕೈಯಲ್ಲಿ ದರ್ಭೆ ಎಳ್ಳು ನೀರು ಹಿಡಿದುಕೊಂಡು ಪ್ರಾಚೀನವೀತೀ ಇರುವಂತೆ ದಕ್ಷಿಣಾಭಿಮುಖವಾಗಿ ಪಿತೃತೀರ್ಥದಿಂದ ಒಂದು ತರ್ಪಣ ಕೊಡಬೇಕು.

**ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ।**
**ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥**

**ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಮ್ ।**
**ಆಬ್ರಹ್ಮಭುವನಾಲ್ಲೋಕಾದಿದಮಸ್ತು ತಿಲೋ(ಕುಶೋ)ದಕಮ್ ।**

ಅನೇನ ಮಹಾಲಯಶ್ರಾದ್ಧಪ್ರತಿನಿಧಿಭೂತತಿಲತರ್ಪಣಕರಣೇನ ಸಮಸ್ತ ಪಿತ್ರಂತರ್ಗತ ಶ್ರೀಲಕ್ಷ್ಮೀಜನಾರ್ದನವಾಸುದೇವಾತ್ಮಕ ಮಧ್ವಾಂತರ್ಗತ ಗೋಪಾಲಕೃಷ್ಣಃ ಪ್ರೀಯತಾಮ್ ।

ಎರಡು ಆಚಮನ ಮಾಡಿ ನಾಮತ್ರಯ ಮಂತ್ರ ಜಪಿಸಬೇಕು.

ಓಂ ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ।

ಈ ರೀತಿಯ ತರ್ಪಣಶ್ರಾದ್ಧವನ್ನು ಮಹಾಲಯದ ಹದಿನಾರು ದಿನಗಳಲ್ಲೂ ಆಚರಿಸಬೇಕು. ಒಂದು ದಿನವಂತೂ ಪಿಂಡಪ್ರದಾನದೊಂದಿಗೆ ಸಕೃನ್ಮಹಾಲಯಶ್ರಾದ್ಧ ಮಾಡಿ ವಿಪ್ರಭೋಜನ ಮಾಡಿಸಬೇಕು.

ಇದು ಬರ್ಹಿಷದ ಮೊದಲಾದ ಚಿರಪಿತೃಗಳ ಪ್ರೀತಿಯನ್ನು ಉಂಟು ಮಾಡುತ್ತದೆ. ಪಿತ್ರನುಗ್ರಹದಿಂದಾಗಿ ಸತ್ಸಂತತಿಪ್ರಾಪ್ತಿ, ಶಾಂತಿ ನೆಮ್ಮದಿಗಳು ನೆಲೆಸುತ್ತವೆ.

**ತಿಸ್ರೋಽಷ್ಟಕ**

ಮಾರ್ಗಶೀರ್ಷ, ಪುಷ್ಯ, ಮಾಘ ಮತ್ತು ಫಾಲ್ಗುಣ ಎಂಬ ನಾಲ್ಕುಮಾಸ ಗಳ ಕೃಷ್ಣಪಕ್ಷದ ಸಪ್ತಮೀ, ಅಷ್ಟಮೀ, ನವಮೀ ತಿಥಿಗಳನ್ನು ತಿಸ್ರೋಽಷ್ಟಕ

ಎನ್ನಲಾಗುತ್ತದೆ. ಇದರಲ್ಲಿ ಅಪರಾಹ್ಣವ್ಯಾಪಿನಿಯಾಗಿ ಅಷ್ಟಮೀ ತಿಥಿಯಿದ್ದ ದಿನ ಅಷ್ಟಕಾ ಎನಿಸಿದೆ. ಅದರ ಹಿಂದಿನ ದಿನ ಪೂರ್ವೇದ್ಯುಃ ಮಾರನೇ ದಿನ ಅನ್ವಷ್ಟಕಾ. ಭಾದ್ರಪದಮಾಸದಲ್ಲಿ ಕೃಷ್ಣಪಕ್ಷದ ಸಪ್ತಮ್ಯಾದಿ ತಿಥಿತ್ರಯವೂ ಅಷ್ಟಕೆಯೆನಿಸಿದೆ. ಅದನ್ನು ಮಹಾಲಯದಲ್ಲೇ ಅಂತರ್ಭಾವಗೊಳಿಸಿ ಒಟ್ಟು ಅಷ್ಟಕೆಗಳು ೧೨ ಎಂದು ಸ್ವೀಕರಿಸಲಾಗಿದೆ.

ಶ್ರೀಭಾಗವತತಾತ್ಪರ್ಯದಲ್ಲಿ ಉಲ್ಲೇಖಗೊಂಡ 'ಸಪ್ತಮ್ಯಾದಿತ್ರಯಂ ಚೈವ ತಥಾ ಚೈವ ತ್ರಯೋದಶೀ। ಚತಸ್ರಸ್ತ್ವಷ್ಟಕಾಃ ಪ್ರೋಕ್ತಾಃ' ಎಂಬ ವ್ಯಾಸಸ್ಮೃತಿಯಂತೆ ಮಾರ್ಗಶಿರಾದಿ ನಾಲ್ಕು ಮಾಸಗಳ ತ್ರಯೋದಶಿಯೂ ಅಷ್ಟಕೆಯೆನಿಸಿದೆ. ಈ ಪಕ್ಷದಲ್ಲಿ ತೊಂಬತ್ತಾರರ ಜೊತೆ ಇನ್ನೂ ನಾಲ್ಕು ಸೇರಿ ೧೦೦ ಭರ್ತಿಯಾಗುತ್ತದೆ. ಹಾಗಿದ್ದೂ ಇದು ಫಾಲ್ಗುನ ಅಮಾವಾಸ್ಯೆಯಲ್ಲಿ ಮನ್ವಾದಿ, ಮಾಘ ಅಮಾವಾಸ್ಯೆಯಂದು ಯುಗಾದಿ, ಭಾದ್ರಪದ ಅಮಾವಾಸ್ಯೆಯಂದು ಮಹಾಲಯ. ಭಾದ್ರಪದಕೃಷ್ಣತ್ರಯೋದಶಿಯಂದು ಯುಗಾದಿ ಎಂಬ ನಾಲ್ಕು ದಿನಗಳಂತೂ ನಿಶ್ಚಿತವಾಗಿ ಕಡಿಮೆಬೀಳುವ ಕಾರಣದಿಂದ 'ಷಣ್ಣವತಿ' ಎಂದೇ ಕರೆಸಿಕೊಂಡಿದೆ.

ಹೀಗೆ ಷಣ್ಣವತಿಗಳು=೯೬ ಎಂದು ಉಲ್ಲೇಖಿಸಲ್ಪಟ್ಟರೂ ತೊಂಬತ್ತಾರು ದಿನ ಪಿತೃದಿನ ಸಿಗುವುದಿಲ್ಲ. ಅದೆಷ್ಟೋ ವೈಧೃತಿ, ವ್ಯತೀಪಾತಾದಿಗಳು ಸಂಕ್ರಾಂತಿಯಂದೋ ಅಮಾವಾಸ್ಯೆಯಂದೋ ಸೇರುವುದರ ಮೂಲಕ ನಿಮಿತ್ತದ್ವಯಸಮಾವೇಶಗೊಂಡು ೯೬ಕ್ಕಿಂತ ಕಡಿಮೆ ಬೀಳುತ್ತದೆ. ಎರಡು ನಿಮಿತ್ತಗಳು ಒಂದೇ ದಿನ ಸೇರಿದಾಗ ಎರಡು ತರ್ಪಣ ಬೇಡ. ಎರಡು ನಿಮಿತ್ತವನ್ನು ಸಂಕಲ್ಪಿಸಿ ಒಂದೇ ಬಾರಿ ತರ್ಪಣವನ್ನೀಯಬೇಕು. ಒಂದು ತರ್ಪಣ ಮುಗಿಸಿ, ಸ್ನಾನಮಾಡಿ (ಅಥವಾ ಮಂತ್ರಸ್ನಾನ ಮಾಡಿಕೊಂಡು) ಎರಡನೇ ನಿಮಿತ್ತದ ತರ್ಪಣಾದಿಗಳನ್ನು ನೀಡಬೇಕೆಂದು ಕೆಲವರ ಅಭಿಪ್ರಾಯ.

ಈ ಷಣ್ಣವತಿಯಲ್ಲಿ ಪಿಂಡಪ್ರದಾನ ಬೇಕಾಗಿಲ್ಲ. ತಿಲತರ್ಪಣದಿಂದ ಪಿತೃಗಳಿಗೆ ಸಹಸ್ರವರ್ಷದ ತೃಪ್ತಿ, ವಿಪ್ರಭೋಜನದಿಂದ ದ್ವಿಸಹಸ್ರವರ್ಷದ

ತೃಪ್ತಿಯುಂಟಾಗುತ್ತದೆ. ಪಿತೃಋಣಪರಿಹಾರಕ್ಕಾಗಿ ಷಣ್ಣವತಿ ಅನುಷ್ಠಾನವೂ ಒಂದು ಸಾಧನ. ಷಣ್ಣವತ್ಯನುಷ್ಠಾನವೆಂದರೆ ಸಂಕಲ್ಪಶ್ರಾದ್ಧ. ಅಂದರೆ ಕೂರ್ಚದಲ್ಲಿ ವಿಪ್ರಾರಾಧನೆ ಮಾಡಿ ವಿಪ್ರಭೋಜನ ಮಾಡಿಸಿ ಪರೇಽಹನಿ ತರ್ಪಣ ಕೊಡುವುದು.

**ತರ್ಪಣವಿಚಾರ**

ಸಾಂವತ್ಸರಿಕಶ್ರಾದ್ಧ ಹಾಗೂ ಸಕೃನ್ಮಹಾಲಯಶ್ರಾದ್ಧದಲ್ಲಿ ಮಾರನೇ ದಿನ ತರ್ಪಣ. ಆದರೆ ಈಗ ಅದೇ ದಿನ ಕೊನೆಯಲ್ಲಿ ತರ್ಪಣ ಕೊಡುವುದು ಚಾಲ್ತಿಯಲ್ಲಿದೆ. ದರ್ಶಶ್ರಾದ್ಧ ಹಾಗೂ ತೀರ್ಥಶ್ರಾದ್ಧಗಳಲ್ಲಿ ಮೊದಲು ತರ್ಪಣ ಕೊಟ್ಟು ನಂತರ ಶ್ರಾದ್ಧ ಮಾಡಬೇಕು. ಉಳಿದ ಷಣ್ಣವತಿಶ್ರಾದ್ಧಗಳಲ್ಲಿ ಅದೇ ದಿನ ಶ್ರಾದ್ಧ ಮುಗಿದ ನಂತರ ತರ್ಪಣ ಕೊಡಬೇಕು.

**ತೀರ್ಥಶ್ರಾದ್ಧ ನಡೆಸಬೇಕಾದ ತೀರ್ಥಕ್ಷೇತ್ರಗಳು**

❖ ಗಂಗಾ, ಗೋದಾವರೀ, ನರ್ಮದಾ, ಸಿಂಧು, ಕಾವೇರಿ, ಕೃಷ್ಣಾ ಎಂಬ ಆರು ಸಮುದ್ರಗಾಮಿ ಮಹಾನದಿಗಳು ಹಾಗೂ ಯಮುನೆಯ ಕಾಲಿಯಮಡು.

❖ ಅಯೋಧ್ಯಾ, ಮಥುರಾ, ಹರಿದ್ವಾರ (ಮಾಯಾ), ಕಾಶೀ, ಕಾಂಚೀ, ಅವಂತೀಪುರಿ (ಉಜ್ಜಯಿನೀ), ದ್ವಾರಕಾ ಈ ಏಳು ಮೋಕ್ಷದಾಯಕ ಕ್ಷೇತ್ರಗಳು. ಮತ್ತು ತೀರ್ಥರಾಜ ಎನಿಸಿದ ಪ್ರಯೋಗ.

❖ ಗಯಾ ಗದಾಧರಕ್ಷೇತ್ರ. ಇಲ್ಲಿ ಮುಖ್ಯವಾಗಿ ವಿಷ್ಣುಪಾದ, ಫಲ್ಗುನೀ ಹಾಗೂ ಅಕ್ಷಯವಟ ಎಂಬ ಮೂರು ಸ್ಥಳಗಳಲ್ಲಿ ಪ್ರತ್ಯೇಕಶ್ರಾದ್ಧಗಳನ್ನಾಚರಿಸಬೇಕು.

❖ ಕುರುಕ್ಷೇತ್ರ ಹಾಗೂ ಬದರೀಕ್ಷೇತ್ರ. ಬದರಿಯಲ್ಲಿ ಮುಂಡನ ಹಾಗು ಉಪವಾಸ ಉಚಿತವಲ್ಲ. ಹಾಗಾಗಿ ಹರಿದ್ವಾರದಲ್ಲೇ ಮುಂಡನ ಹಾಗೂ ಕ್ಷೇತ್ರೋಪವಾಸಗಳನ್ನು ಮಾಡಿಕೊಂಡು ಕ್ಷೇತ್ರವಿಧಿಯನ್ನು ನಡೆಸಿ ನಂತರ ಬದರಿಯಲ್ಲಿ ತೀರ್ಥಶ್ರಾದ್ಧವನ್ನು ಮಾತ್ರ ಮಾಡಬೇಕು. ಹರಿದ್ವಾರ

ಹಾಗೂ ಬದರಿಯ ಮಧ್ಯೆ ಸಿಗುವ ಪಂಚಪ್ರಯಾಗಗಳಲ್ಲಿ ತರ್ಪಣ ಮಾತ್ರ ಕೊಡಬೇಕು.

❖ ಶ್ರೀರಂಗ, ಶ್ರೀಮುಷ್ಣ, ವೇಂಕಟಾಚಲ, ನೈಮಿಷಾರಣ್ಯ, ತೋತಾದ್ರಿ, ಪುಷ್ಕರ ಹಾಗೂ ಸಾಲಿಗ್ರಾಮ ಎಂಬ ಸ್ವಯಂವ್ಯಕ್ತಕ್ಷೇತ್ರಗಳು.

❖ ಇವಲ್ಲದೇ ತೀರ್ಥಪ್ರಬಂಧ ತಿಳಿಸಿರುವ ಬಿದರಹಳ್ಳಿಯ ಅಶ್ವತ್ಥಸನ್ನಿಧಿ, ಭಾಗವತ ತಿಳಿಸಿರುವ ಪಂಪಾಕ್ಷೇತ್ರ, ಬಿಂದುಸರೋವರ, ಗಂಡಕೀ ಪುಲಹಾಶ್ರಮಗಳೂ ಪಿತೃಕಾರ್ಯಕ್ಕೆ ಪ್ರಶಸ್ತಕ್ಷೇತ್ರಗಳು.

# ಆಶೌಚ ವಿಚಾರ

**ಆಶೌಚದ ಪ್ರಭೇದಗಳು**

ಆಶೌಚ ಐದು ಬಗೆ. ದಶಾಹಾಶೌಚ (ಹತ್ತುದಿನದ್ದು) ತ್ರ್ಯಹಾಶೌಚ (ಮೂರು ದಿನದ್ದು), ಪಕ್ಷಿಣ್ಯಾಶೌಚ (ಒಂದೂವರೆ ದಿನದ್ದು), ಏಕಾಹಾಶೌಚ (ಒಂದು ದಿನದ್ದು) ಮತ್ತು ಸ್ನಾನಪರ್ಯಂತಾಶೌಚ ಎಂಬುದಾಗಿ.

**ಪಕ್ಷಿಣೀ**–ಸೂರ್ಯಾಸ್ತಾನಂತರ ಮರಣವಾದರೆ ಆ ರಾತ್ರಿ ಮರುದಿನ ಹಗಲು ಮತ್ತು ಅಂದಿನ ರಾತ್ರಿ ಆಶೌಚವಿದ್ದು ನಂತರದ ಸೂರ್ಯೋದಯಕ್ಕೆ ಸ್ನಾನದಿಂದ ಶುದ್ಧಿ. ಹಗಲು ಮರಣವಾದರೆ ಹಗಲು, ಅಂದಿನ ರಾತ್ರಿ, ಮತ್ತು ಮರುದಿನ ಹಗಲು ಆಶೌಚ. ನಕ್ಷತ್ರವನ್ನು ನೋಡಿ ಸ್ನಾನಮಾಡುವುದು. ಹೀಗೆ ರಾತ್ರಿಗೆ ಎರಡು ಪಕ್ಷಗಳಂತೆ ಅತ್ತಿತ್ತ ಹಗಲುಗಳಲ್ಲಿ ಆಶೌಚವಿರುವುದರಿಂದ ಪಕ್ಷಿಣೀ ಎನ್ನುತ್ತಾರೆ. ಒಂದೂವರೆ ದಿನವೆಂದರ್ಥ. ಹಗಲು ಮರಣವಾದರೆ ಮರುದಿನ ರಾತ್ರಿಗೆ ಶುದ್ಧವಾದರೂ ಅಂದು ರಾತ್ರಿ ಉಪವೀತವನ್ನು ಬದಲಿಸುವಂತಿಲ್ಲ. ಸ್ನಾನಮಾಡಿ ಸಂಧ್ಯಾವಂದನೆಯನ್ನು ಎಂದಿನಂತೆ ಮಾಡಬಹುದು. ರಾತ್ರಿಪೂಜಾದಿಗಳಿಲ್ಲ. ಮರುದಿನ ಪ್ರಾತಃ ಉಪವೀತಬದಲಿಸಿ ಪೂಜಾದ್ಯನುಷ್ಠಾನ.

**ಉಪವೀತ ಬದಲಿಸುವಿಕೆ**

'ಸ್ನಾನಮಾತ್ರ' ಎಂಬ ಬಗೆಯ ಅಶೌಚ ಇದ್ದಾಗ ಯಜ್ಞೋಪವೀತವನ್ನು ಬದಲಾಯಿಸಬೇಕಾಗಿಲ್ಲ. ಉಳಿದೆಲ್ಲಾ ಅಶೌಚಗಳಲ್ಲೂ ಉಪವೀತ ಬದಲಾವಣೆ ಅನಿವಾರ್ಯ. ಸಾಪಿಂಡ್ಯಸಂಬಂಧವಿಲ್ಲದಿದ್ದರೂ ಶವದ ಹಿಂದೆ ಪ್ರೀತಿನಿಮಿತ್ತ ನಾಲ್ಕು ಹೆಜ್ಜೆ ಇಟ್ಟರೆ ಅಶೌಚವು ಪ್ರಾಪ್ತವಾಗುತ್ತದೆ. ಸ್ನಾನ ಮಾಡಿ ಉಪವೀತ ಬದಲಾಯಿಸುವುದರಿಂದ ಶುದ್ಧಿ.

**ಸಂಪರ್ಕಾಶೌಚ**

''ಭರ್ತುಃ ಕಿಲಾಘಂ ನ ಜಹಾತಿ ಪತ್ನೀಂ ಸಂಪರ್ಕಜಾತಂ ತು ಭವೇನ್ನ ತಸ್ಯಾಃ'' ಎಂಬ ಆಶೌಚನಿರ್ಣಯದ ಮಾತಿನಂತೆ ಗಂಡನಿಗೆ ಬಂದ ಆಶೌಚವು ಸಹಧರ್ಮಿಣಿಯಾದ ಪತ್ನಿಗೂ ಸ್ವಾಭಾವಿಕವಾಗಿಯೇ ಬರುತ್ತದೆ. ಹಾಗಿದ್ದರೂ ಗಂಡನಿಗೆ ಸಂಪರ್ಕಾಶೌಚ ಎಂದರೆ ಆಶೌಚಬಂದವನ ಅನ್ನಪಾನಾದಿಗಳ ಸೇವನೆಯಿಂದ ಬಂದ ಆಶೌಚವು ಪತ್ನಿಗೆ ಬರುವುದಿಲ್ಲ. ಹತ್ತು ದಿನಗಳಿಗಿಂತ ಕಡಿಮೆಯಾದ ಅಶೌಚವು ಗಂಡನಿಗೆ ಬಂದಲ್ಲಿ ಅದು ಪತ್ನಿಗೆ ಇಲ್ಲವೆಂದು ಘಟ್ಟದ ಮೇಲಿನ ಆಚಾರ. ಆಶೌಚವುಳ್ಳವನ ಸ್ಪರ್ಶದಿಂದುಂಟಾದ ಆಶೌಚವು ಸ್ನಾನಮಾತ್ರದಿಂದ ಶುದ್ಧವಾಗುತ್ತದೆ. ಆಶೌಚಾನ್ನಸಂಪರ್ಕದಿಂದ ಬಂದ ಆಶೌಚವು ತಿಂದ ಅನ್ನವು ಜೀರ್ಣವಾಗಿ ಪತನವಾಗುವ ತನಕ ಇರುತ್ತದೆ. ಅಂದರೆ ತ್ರಿದಿನಾಶೌಚ.

**ಅಂತರ್ದಶಾಹೇ ಭುಕ್ತ್ವಾನ್ನಂ ಸೂತಕೇ ಮೃತಕೇಽಪಿ ವಾ ।**
**ಅಸ್ಯಾಶೌಚಂ ಭವೇತ್ತಾವದ್ಯಾವದನ್ನಂ ವ್ರಜತ್ಯಧಃ ॥**

**ಉಭಾಭ್ಯಾಮಪರಿಜ್ಞಾತೇ ನಾಶೌಚಂ ನೈವ ದೋಷಕೃತ್ ।**
**ಏಕೇನಾಪಿ ಪರಿಜ್ಞಾತೇ ಭೋಕ್ತುರ್ದೋಷಮುಪಾವಹೇತ್ ॥**

ಭೋಕ್ತೃವಿಗೂ ಭೋಜಕನಿಗೂ ಆಶೌಚವಿದ್ದು ಅದು ತಿಳಿಯದಿದ್ದರೆ ಭೋಜನವಾದ ಮೇಲೆ ತಿಳಿದರೂ ದೋಷವಿಲ್ಲ. ಒಬ್ಬನಿಗೆ ತಿಳಿದಿದ್ದು ಇನ್ನೊಬ್ಬನಿಗೆ ತಿಳಿಯದೇ ಉಂಡರೂ ಭೋಕ್ತೃವಿಗೆ ಆಶೌಚ ಬಂದೇ ಬರುತ್ತದೆ.

ಉಂಡರೆ ಮೂರುದಿನ, ಕುಡಿದರೆ ಒಂದು ದಿನ. ಆಶೌಚಾನ್ನವನ್ನು ಉಂಡವ ನಿಗೆ ಅನ್ನವಿತ್ತವನ ಆಶೌಚವು ಮುಗಿಯುವಲ್ಲಿಯ ತನಕವೂ ಆಶೌಚವೆಂಬ ಮಾತೂ ಅಶೌಚನಿರ್ಣಯದಲ್ಲಿದೆ.

ನಿಕಟಸಂಪರ್ಕ, ಪ್ರೀತಿ, ಸೌಹಾರ್ದಗಳುಳ್ಳ ದೂರಸಂಬಂಧಿಗಳ ಹೆಸರು ಆಶೌಚದಾಯಿಗಳ ಪಟ್ಟಿಯಲ್ಲಿ ಸೇರಿರದಿದ್ದರೂ ಅವರ ಮರಣನಿಮಿತ್ತ ಸ್ನೇಹಕ್ಕಾಗಿ ಮೃತಾತ್ಮತೃಪ್ತಿಗಾಗಿ ಸ್ನಾನ ಮಾಡುವುದು ಉಚಿತ. ಉಡುಪಿಕಡೆಯ ಸಂಪ್ರದಾಯದಲ್ಲಿ ಸ್ತ್ರೀಯರು ತಮ್ಮ ತವರು ಕಡೆಯಲ್ಲಿ ಸೋದರರು ಹತ್ತುದಿನ ಆಶೌಚಪಡೆಯುವ ಮರಣನಿಮಿತ್ತ ಶ್ರವಣವಾದೊಡನೆ ಸ್ನಾನ ಮಾಡುತ್ತಾರೆ.

**ಒಂದು ಆಶೌಚದ ಮಧ್ಯೆ ಇನ್ನೊಂದು ಆಶೌಚ ಬಂದರೆ**

೧. ಜನನಾಶೌಚದ ಮಧ್ಯೆ ಅಷ್ಟೇ ದಿನಗಳ ಅಥವಾ ಅದಕ್ಕೂ ಕಡಿಮೆ ದಿನಗಳ ಜನನಾಶೌಚವು ಬಂದರೆ; ಮೊದಲಿನ ಆಶೌಚದಲ್ಲಿಯೇ ನಂತರ ಬಂದುದೂ ನಿವೃತ್ತಿಯಾಗುತ್ತದೆ.

೨. ಮರಣಾಶೌಚದಲ್ಲಿ ಅದಕ್ಕೆ ಸಮಾನವಾದ ಅಥವಾ ಕಡಿಮೆ ದಿನಗಳ ಮರಣಾಶೌಚವಾಗಲೀ ಜಾತಾಶೌಚವಾಗಲೀ ಬಂದರೆ ಮೊದಲಿನ ಮೃತಾಶೌಚದಲ್ಲಿಯೇ ನಂತರ ಬಂದ ಆಶೌಚವೂ ನಿವೃತ್ತಿಯಾಗುತ್ತದೆ.

೩. ಇಂತಹ ಸಂದರ್ಭದಲ್ಲಿ ಒಂದು ಆಶೌಚದ ಮಧ್ಯದಲ್ಲಿ ಇನ್ನೊಂದು ಆಶೌಚವು ತಿಳಿದು ಬಂದರೆ ಮಾತ್ರ ನಿವೃತ್ತಿಯಾಗುತ್ತದೆ.

೪. ಅಲ್ಪದಿನಗಳ ಮೊದಲ ಆಶೌಚದ ಮಧ್ಯೆ ಹೆಚ್ಚು ದಿನಗಳ ಜಾತಾಶೌಚ ಅಥವಾ ಮೃತಾಶೌಚ ಬಂದರೆ ಮೊದಲು ಆಶೌಚದಲ್ಲಿ ನಿವೃತ್ತಿಯಾಗುವುದಿಲ್ಲ. ಕಡೆಗೆ ಬಂದ ಹೆಚ್ಚುದಿನದ ಪ್ರಬಲಾಶೌಚ ನಿವೃತ್ತಿಯಾಗುವಾಗಲೇ ಅಶೌಚನಿವೃತ್ತಿ.

೫. ತಂದೆ–ತಾಯಿಯರ ಮರಣನಿಮಿತ್ತ ಆಶೌಚವು ಯಾವ ಆಶೌಚದ ಮಧ್ಯೆ ಬಂದರೂ ನಿವೃತ್ತಿಯಾಗದು.

**ಆಶೌಚವುಳ್ಳವರನ್ನು ಮುಟ್ಟಿಸಿಕೊಂಡರೆ**

ಆಶೌಚವು ಎರಡು ವಿಧ. ಅಸ್ಪೃಶ್ಯತಾಪಾದಕ ಮತ್ತು ಕರ್ಮಾನಧಿಕಾರಾಪಾದಕ ಎಂಬುದಾಗಿ. ಜಾತಾಶೌಚದಲ್ಲಿ ಅಸ್ಪೃಶ್ಯತೆಯಿರುವುದಿಲ್ಲ. ಹುಟ್ಟಿದ ಮಗುವಿನ ತಂದೆಗೂ ಹತ್ತುದಿನ ಸಂಧ್ಯಾದಿಕರ್ಮಗಳಲ್ಲಿ ಅನಧಿಕಾರ ಮಾತ್ರ. ಅಸ್ಪೃಶ್ಯತೆಯಿಲ್ಲ. ಇವರನ್ನು ಮುಟ್ಟಿಸಿಕೊಳ್ಳಬಹುದು. ಇವರು ದೇವಸ್ಥಾನಗಳ ಅಂಗಣವನ್ನು ಪ್ರವೇಶಿಸಬಹುದು. ಗರ್ಭಗುಡಿಯ ಪ್ರವೇಶವಿಲ್ಲ.

ಮೃತಾಶೌಚದಲ್ಲಿ ಅಸ್ಪೃಶ್ಯತೆಯಿದೆ. ಮೃತಾಶೌಚವಿದ್ದವರನ್ನು ಮುಟ್ಟಿಸಿಕೊಂಡರೆ ಸ್ನಾನದಿಂದ ಶುದ್ಧಿ. ಉಪವೀತಬದಲಾವಣೆ ಬೇಕಾಗಿಲ್ಲ. ಆದರೆ ಔರ್ಧ್ವದೈಹಿಕಕರ್ಮದ ಕರ್ತೃಗಳನ್ನು ಮುಟ್ಟಿಸಿಕೊಂಡರೆ ಸ್ನಾನದೊಂದಿಗೆ ಉಪವೀತಬದಲಾವಣೆಯೂ ಕರ್ತವ್ಯ.

ಮೃತಾಶೌಚದಲ್ಲೂ ಮೊದಲ ನಾಲ್ಕುದಿನಮಾತ್ರ ಅಸ್ಪೃಶ್ಯತೆಯೆಂಬ ಮಾತೂ ಇದೆ.

**ಮೃತಕಂ ತು ತ್ರಿಧಾ ಭಿತ್ವಾ ಯಾವತ್ಪೂರ್ವಾಂಶನಿರ್ಗಮಃ ।**
**ಸರ್ವೇ ತ್ವಸ್ಪೃಶ್ಯತಾಂ ಯಾಂತಿ ಸಂಚಯಸ್ತು ಸ(ಸ್ತೂಪ) ಲಕ್ಷಣಮ್ ॥**

ಮೃತಾಶೌಚವನ್ನು ಮೂರುಭಾಗ ಮಾಡಿ ಅದರಲ್ಲಿ ಮೊದಲು ಒಂದುಭಾಗ ಮುಗಿಯುವಲ್ಲಿಯ ತನಕ ಸರ್ವರೂ ಅಸ್ಪೃಶ್ಯರಾಗಿರುತ್ತಾರೆ. ಅಸ್ಥಿಸಂಚಯನದ ತನಕ ಮಾತ್ರ ಅಸ್ಪೃಶ್ಯತೆಯೆಂಬ ಮಾತಿಗೂ ಈ ಪೂರ್ವಾಂಶನಿರ್ಗಮ (೪ ದಿನ) ಪರ್ಯಂತವಷ್ಟೇ ಅಸ್ಪೃಶ್ಯತೆಯೆಂದರ್ಥ. (ಕೃಷ್ಣಾಚಾರ್ಯಸ್ಮೃತಿಮುಕ್ತಾವಲೀ) ಹಾಗಾಗಿ ತೌಳವರಲ್ಲಿ ಮೃತಾಶೌಚದ ನಾಲ್ಕುದಿನ ಮಾತ್ರ ಅಸ್ಪೃಶ್ಯತೆಯ ಆಚರಣೆಯಿದೆ.

- ❖ ಆಶೌಚವುಳ್ಳವನನ್ನು ಓರ್ವ ಸ್ಪರ್ಶಿಸಿ, ಅವನನ್ನು ಮೂರನೆಯವ ಮುಟ್ಟಿದರೆ ಮೂರನೆಯವನಿಗೆ ಕೈಕಾಲು ತೊಳೆದು ಆಚಮನದಿಂದ ಶುದ್ಧಿ. ಸ್ನಾನ ಕೃತಾಕೃತ. ಮಾಡಬೇಕಾದ ಅನಿವಾರ್ಯತೆಯಿಲ್ಲ.

ತಂದೆಗೆ ಶಿಶುದರ್ಶನಮಾಡಿ ಸಚೇಲಸ್ನಾನ ಮಾಡುವಲ್ಲಿಯ ತನಕ ಅಸ್ಪೃಶ್ಯತೆಯೆಂದು ಪಾರಾಶರೀಯದಲ್ಲಿದೆ.

**ಆಶೌಚದ ಶುದ್ಧಿ**

ಹತ್ತುದಿನ ಮೂರುದಿನ ಮುಂತಾಗಿ ಹಿಂದೆ ಹೇಳಿದ ದಿನದಂದು ಆಶೌಚವು ನಿವೃತ್ತವಾಗುತ್ತದೆ. ದಶಾಹಾಶೌಚವಿದ್ದಾಗ ಹನ್ನೊಂದನೆಯ ದಿನ ಶುದ್ಧಿ; ಪ್ರಾತಃಕಾಲ ದಾಟಿ ಸಂಗವಕಾಲಕ್ಕೆ (ಸಮಯ ಬೆಳಿಗ್ಗೆ ೮.೩೦ಕ್ಕೆ) ಆಶೌಚನಿವೃತ್ತಿ ಎಂಬ ಮಾತುಗಳಿದ್ದರೂ ಪ್ರಾತಃಕಾಲದ ಸೂರ್ಯೋದಯಕ್ಕೆ ಶುದ್ಧಿಯೆಂಬುದು ಎಲ್ಲೆಡೆ ವಾಡಿಕೆಯಲ್ಲಿದೆ.

ಸೂರ್ಯದರ್ಶನ ಮಾಡಿ ಸ್ನಾನಿಸಿ ಆಶೌಚಕಾಲದಲ್ಲಿ ತಾನು ಉಪಯೋಗಿಸಿದ ವಸ್ತ್ರಗಳನ್ನೆಲ್ಲಾ ನೀರಿನಿಂದ ಶುದ್ಧಿಗೊಳಿಸಿ ನೂತನ ಉಪವೀತವನ್ನು ಧರಿಸುವುದರಿಂದ ಶುದ್ಧಿ. ಪಂಚಗವ್ಯಪ್ರಾಶನವು ಅನಿವಾರ್ಯವಲ್ಲ, ಮಾಡುವುದು ಶ್ರೇಷ್ಠ. ಸಪಿಂಡರ ಮರಣದಲ್ಲಿ ಶವಸ್ಪರ್ಶಾದಿಗಳನ್ನು ಮಾಡಿದ್ದರೆ ಶುದ್ಧಿಯ ದಿನದಂದು ಪಂಚಗವ್ಯಪ್ರಾಶನವೂ ಅಪೇಕ್ಷಿತ.

ಗಂಡುಶಿಶುವನ್ನು ಪ್ರಸವಿಸಿದ ಬಾಣಂತಿಗೆ ಮಗುವಿನ ಜನನದಿಂದ ಮೂವತ್ತು ದಿನಗಳ ತನಕ ಸೂತಿಕಾಶೌಚವಿರುತ್ತದೆ. ಹೆಣ್ಣುಶಿಶುವನ್ನು ಪ್ರಸವಿಸಿದಾಗ ನಲವತ್ತು ದಿನ ಸೂತಿಕಾಶೌಚ. ಹತ್ತುದಿನದ ನಂತರ ನಾಮಕರಣಾದಿ ಕರ್ಮಕಾಲದಲ್ಲಿ ಈಕೆಗೆ ಶುದ್ಧಿಯಿರುತ್ತದೆ.

ಶವವನ್ನು ಸ್ಪರ್ಶಮಾಡಿದರೆ ಸ್ನಾನಮಾಡಿ ಅಗ್ನಿಸ್ಪರ್ಶಮಾಡಿದರೆ ಶುದ್ಧಿ. ಉಪವೀತ ಬದಲಾವಣೆಯೂ ಅಪೇಕ್ಷಿತ. ಶವಸ್ಪರ್ಶ ಮಾಡಿದಂದು ಆತನು ದೇವಪೂಜಾದಿಗಳನ್ನು ಮಾಡುವ ಸಂಪ್ರದಾಯವಿಲ್ಲ.

**ಆಶೌಚದಲ್ಲಿ ಸಂಧ್ಯಾವಂದನೆ**

ರಾಷ್ಟ್ರವು ಕ್ಷೋಭೆಗೊಳಗಾದಾಗ, ತಾನು ರೋಗದಿಂದ ಬಳಲುತ್ತಿರುವಾಗ ಜಾತಾಶೌಚ ಮೃತಾಶೌಚಗಳಿದ್ದಾಗ ಸಂಧ್ಯಾವಂದನೆಯನ್ನು ಬಿಡುವುದು ದೋಷಕರವಲ್ಲ.

**ರಾಷ್ಟ್ರಕ್ಷೋಭೇ ಚ ರೋಗಾರ್ತೇ ಜಾತೇ ಚ ಶವಸೂತಕೇ ।**
**ಸಂಧ್ಯಾವಂದನವಿಚ್ಛಿತ್ತಿರ್ನ ದೋಷಾಯ ಕದಾಚನ ॥ (ಸ್ಮೃತಿಭಾಸ್ಕರ)**

ಸಂಧ್ಯಾವಂದನೆ ಬಿಡುವುದೆಂದರೆ ಪೂರ್ತಿ ಬಿಡುವುದಲ್ಲ. ಸೂತಕ-ಮೃತಕಗಳಲ್ಲಿ (ವೃದ್ಧಿ ಮತ್ತು ಸಾವಿನ ಮೈಲಿಗೆಯಲ್ಲಿ) ಸಂಧ್ಯಾಕರ್ಮವನ್ನು ಬಿಡಲೇಬಾರದು. 'ಸೂತಕೇ ಮೃತಕೇ ಚೈವ ಸಂಧ್ಯಾಕರ್ಮ ನ ಹಿ ತ್ಯಜೇತ್' ಎಂಬ ಮಾತಿರುವುದರಿಂದ ಬ್ರಾಹ್ಮಣ್ಯವು ಉಳಿಯುವುದಕ್ಕೆ ಎಷ್ಟು ಅನಿವಾರ್ಯವೋ ಅಷ್ಟೇ ಸಂಧ್ಯೆಯನ್ನು ಮಾಡಬೇಕು. ವಿಸ್ತರಿಸಿ ಮಾಡುವಂತಿಲ್ಲ. ಅದೆಷ್ಟೆಂದರೆ–

**ಸೂತಕೇ ಮೃತಕೇ ಕುರ್ಯಾತ್ ಪ್ರಾಣಾಯಾಮಮಮಂತ್ರಕಮ್ ।**
**ತಥಾ ಮಾರ್ಜನಮಂತ್ರಾಂಸ್ತು ಮನಸೋಚ್ಚಾರ್ಯ ಮಾರ್ಜಯೇತ್ ॥**

**ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ ।**
**ಮಾರ್ಜನಂ ತು ನ ವಾ ಕಾರ್ಯಮುಪಸ್ಥಾನಂ ನ ಚೈವ ಹಿ ॥**

(ಸ್ಮೃತಿಮುಕ್ತಾವಲೀ, ಧರ್ಮಸಿಂಧು)

ಮನಸಾ ದಶಗಾಯತ್ರೀಜಪಃ ಕಾರ್ಯಃ (ಧರ್ಮಸಿಂಧು)

**ಆಶೌಚಕಾಲದ ಕನಿಷ್ಠಸಂಧ್ಯಾವಂದನೆ ಇಷ್ಟು**

೧. ಸ್ನಾನ ಮುಗಿಸಿ ಎರಡು ಆಚಮನ

೨. ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ....ಪ್ರಾತಃ (ಸಾಯಂ) ಸಂಧ್ಯಾಂ ಕರಿಷ್ಯೇ ಎಂದು ಸಂಕಲ್ಪ.

೩. ಮಂತ್ರವಿಲ್ಲದೇ ಪ್ರಾಣಾಯಾಮತ್ರಯ.

೪. ಆಪೋಹಿಷ್ಠಾ ಮಂತ್ರಗಳನ್ನು ಮನಸ್ಸಿನಲ್ಲೇ ಉಚ್ಚರಿಸಿಕೊಂಡು ಮಾರ್ಜನ.

೫. ಗಾಯತ್ರೀಯನ್ನು ಸ್ಪಷ್ಟವಾಗಿ ಉಚ್ಚರಿಸಿ ಮೂರು ಅರ್ಘ್ಯಪ್ರದಾನ.

೬. ಗಾಯತ್ರೀಮಂತ್ರದ ಋಷಿಚ್ಛಂದೋ ದೇವತಾನ್ಯಾಸಗಳೊಂದಿಗೆ ಹತ್ತು ಗಾಯತ್ರೀಜಪ; ಒಂದು ತರ್ಪಣ.

೭. 'ಕಾಯೇನ ವಾಚಾ...' ಎಂದು ಕೃಷ್ಣಾರ್ಪಣ. ಇಷ್ಟೇ.

ವಿ.ಸೂ.: ಘಟ್ಟದ ಮೇಲೆ ದಶಗಾಯತ್ರೀಜಪವನ್ನೂ ಮಾಡುವುದಿಲ್ಲ. 'ಆಹ್ನಿಕ ಕೌಸ್ತುಭ'ವು ನಿಷೇಧಿಸಿದೆ.

★ 'ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್' ಎಂಬ ಆದೇಶವಿದ್ದರೂ ಆಶೌಚಕಾಲದಲ್ಲಿ ಅಷ್ಟಾಕ್ಷರಮಂತ್ರಜಪವಿಲ್ಲ. ದಿಗುಪಸ್ಥಾನಾದಿಗಳೂ ಇಲ್ಲ.

**ಆಶೌಚಕಾಲದಲ್ಲಿ ಏನೇನು ಮಾಡಬಾರದು?**

೧. ಔಪಾಸನ, ವೈಶ್ವದೇವ ಬ್ರಹ್ಮಯಜ್ಞಗಳು ವರ್ಜ್ಯ. (ಔಪಾಸನ ಹೋಮವನ್ನು ಭಿನ್ನಗೋತ್ರದವರಿಂದ ಮಾಡಿಸಬೇಕೆಂದಿದೆ. ಇದು ಅಗ್ನಿಹೋತ್ರಿಗಳಲ್ಲಿ ಮಾತ್ರ ಚಾಲ್ತಿಯಲ್ಲಿದೆ. ಉಳಿದವರು ಆಶೌಚಾಂತ್ಯದಲ್ಲಿ ಆಶೌಚಾಘಪ್ರಾಯಶ್ಚಿತ್ತವಾಗಿ ಶತಗಾಯತ್ರೀ ಜಪಿಸಿ ಔಪಾಸನವನ್ನು ಮುಂದುವರೆಸುತ್ತಾರೆ.)

ದಾನ–ಪ್ರತಿಗ್ರಹ, ಯಜನ–ಯಾಜನ, ಅಧ್ಯಯನ–ಅಧ್ಯಾಪನಗಳಿಲ್ಲ.

೨. ಅಭಿವಾದನ, ಆಶೀರ್ವಾದಗಳು ಆಶೌಚಕಾಲದಲ್ಲಿ ನಿಷಿದ್ಧ. ದೇವರಿಗೂ ದೀರ್ಘದಂಡಪ್ರಣಾಮಾದಿಗಳಿಲ್ಲ. ಜಾತಾಶೌಚದಲ್ಲಿ ದೇವರಿಗೆ ಮಾತ್ರ ನಮಸ್ಕಾರವನ್ನು ಮಾಡಬಹುದು. ಹಿರಿಯರು ಬಂದಾಗ ಕೈಮುಗಿಯಬೇಕು. ಪ್ರಣಾಮವಿಲ್ಲ.

೩. ವಿಷ್ಣುಪಂಚಕಾದಿವ್ರತಗಳನ್ನು ಆರಂಭಿಸಿದ್ದರೂ, ಆಶೌಚಕಾಲದಲ್ಲಿ ಉಪವಾಸಾದಿವಿಧಿಯನ್ನು ಆಚರಿಸಬಾರದು. ಏಕಾದಶೀವ್ರತವನ್ನು ಆಚರಿಸಲೇಬೇಕು.

೪. ಆಶೌಚಮಧ್ಯದಲ್ಲಿ ಸಾಂವತ್ಸರಿಕಶ್ರಾದ್ಧವು ಬಂದರೆ ಆಶೌಚಾಂತ್ಯದಲ್ಲಿ

ಆಚರಿಸಬೇಕು. ದರ್ಶಾದಿಗಳು ಬಂದರೆ ತನ್ನಿಮಿತ್ತ ತರ್ಪಣಾದಿಗಳನ್ನು ಆಚರಿಸುವಂತಿಲ್ಲ.

೫. ಭೋಜನಕಾಲದಲ್ಲಿ ಪರಿಷೇಕಾದಿಗಳಿದ್ದರೂ ಚಿತ್ರಾಹುತಿಯಿಲ್ಲ.

೬. ಜಾತಾಶೌಚದಲ್ಲಿ ಪುರಾಣಶ್ರವಣ ಮಾಡಬಹುದು. ವೇದವೇದಾಂತ ಪಾಠಗಳನ್ನು ಕೇಳುವಂತಿಲ್ಲ. ಭಜನೆ–ಸಂಕೀರ್ತನೆಗಳನ್ನು ಮಾಡಬಹುದು. ಶಿಷ್ಟಶ್ರೋತ್ರಿಯರೊಂದಿಗೆ ಪಂಕ್ತಿಯಿಲ್ಲ. ವಿವಾಹಾದಿಕಾರ್ಯಗಳಲ್ಲಿ ಭಾಗವಹಿಸಿದರೂ ಆಶೀರ್ವಾದ ಮಾಡುವಂತಿಲ್ಲ. ದೇವಸ್ಥಾನದ ಗರ್ಭಗೇಹವನ್ನು ಹೊರತು ಪಡಿಸಿ ಅಂಗಣಕ್ಕೆ ಪ್ರವೇಶವಿದೆ.

★ ಮೃತಾಶೌಚದಲ್ಲಿ ಇವುಗಳಲ್ಲಿ ಯಾವುದಕ್ಕೂ ಅವಕಾಶವಿಲ್ಲ. ಭಜನೆ ಕೀರ್ತನೆಗಳು ಹರಿನಾಮಸ್ಮರಣೆಗೆ ಎಂದೂ ನಿಷೇಧವಿಲ್ಲ.

೭. ಗ್ರಹಣಕಾಲದಲ್ಲಿ ಆಶೌಚವಿಲ್ಲ. ಸರ್ವಾನುಷ್ಠಾನವನ್ನೂ ಮಾಡಬಹುದು.

೮. ವಿಪ್ರಾದಿಭೋಜನಕ್ಕಾಗಿ ಅನ್ನಾದಿ ಸಕಲ ಸಿದ್ಧತೆಗಳಾಗಿರುವಾಗ ಆಶೌಚ ತಿಳಿದರೆ ಸಿದ್ಧವಸ್ತುಗಳಿಗೆ ಆಶೌಚವಿಲ್ಲ. ಇತರರಿಂದ ಬಡಿಸುವಂತೆ ವ್ಯವಸ್ಥೆ ಮಾಡಬೇಕು. 'ಪೂರ್ವಸಂಕಲ್ಪಿತಾನ್ನೇಷು ನ ದೋಷಃ ಪರಿಕೀರ್ತಿತಃ'.

# ಆಶೌಚ ವಿವರಣ ಕೋಷ್ಟಕ

| | | |
|---|---|---|
| ಹುಟ್ಟಿದ ಗಂಡುಮಗು ೧೧ನೇ ಅಥವಾ ೧೨ನೇ ದಿನದಂದು ಮೃತವಾದ (ನಾಮಕರಣದ ಒಳಗೆ)<br>ಇದೇ ವಯಸ್ಸಿನ ಹೆಣ್ಣುಮಗು ಮೃತವಾದರೆ | ತಂದೆ ತಾಯಿಯರಿಗೆ ಮಾತ್ರ<br>೩ ದಿನ ಮೃತಾಶೌಚ<br>೧ ದಿನ ಮೃತಾಶೌಚ | ಜ್ಞಾತಿಗಳಿಗೆ (ಮೂರುತಲೆ) ಸ್ನಾನಮಾತ್ರ<br>ಸ್ನಾನಮಾತ್ರ |
| ಮುಂದೆ ೬ ತಿಂಗಳು ಪೂರ್ತಿಯಾಗುವುದರ ಒಳಗೆ (ದಂತಜನಿ) ಗಂಡು ಶಿಶು ಮೃತವಾದರೆ<br>ಹೆಣ್ಣುಶಿಶು | ತಂದೆ ತಾಯಿಯರಿಗೆ ೩ ದಿನ<br>೧ ದಿನ | ಜ್ಞಾತಿಗಳಿಗೆ ದಹನ ಮಾಡಿದರೆ ೧ ದಿನ; ಹೂಳಿದರೆ ಸ್ನಾನಮಾತ್ರ<br>ಸ್ನಾನ |
| ಏಳು ತಿಂಗಳಿನಿಂದ ಮೂರು ವರ್ಷದ ಒಳಗಾಗಿ (ದಂತಜನಿಯಿಂದ ಚೌಲದವರೆಗೆ)<br>ಹೆಣ್ಣುಶಿಶು | ತಂದೆತಾಯಿಯರಿಗೆ ೩ ದಿನ<br>೧ ದಿನ<br>ತಂದೆ ತಾಯಿಯರಿಗೆ ೩ ದಿನ | ಜ್ಞಾತಿಗಳಿಗೆ ೧ ದಿನ<br>ಸ್ನಾನಮಾತ್ರ |
| ೩-೮ ವರ್ಷ ಪೂರ್ತಿ (ಚೌಲದಿಂದ ಉಪನಯನಪರ್ಯಂತ) ಗಂಡು ಶಿಶು ಮೃತುವಾದರೆ<br>ಹೆಣ್ಣುಮಗು ೩ ವರ್ಷದಿಂದ ವಾಗ್ದಾನದ ಒಳಗಾಗಿ ಮೃತಳಾದರೆ<br>(ಋತುಮತಿಯಾಗುವುದರೊಳಗೆ)<br>''<br>ವಾಗ್ದಾನವಾಗಿ ವಿವಾಹದ ಒಳಗೆ ಹೆಣ್ಣು ಮೃತಳಾದರೆ | ತಂದೆತಾಯಿಯರಿಗೆ ೩ ದಿನ<br>ತಂದೆತಾಯಿಯರಿಗೆ ೩ ದಿನ<br>ತಂದೆತಾಯಿಯರಿಗೆ ೩ ದಿನ<br>ನಿಶ್ಚಿತವಾದ ಗಂಡಿಗೆ, ಅವನ ತಂದೆತಾಯಿ ಸಪಿಂಡರಿಗೆ ೩ ದಿನ | ಜ್ಞಾತಿಗಳಿಗೂ ೩ ದಿನ<br>ಜ್ಞಾತಿಗಳಿಗೆ ೧ ದಿನ<br>ಜ್ಞಾತಿಗಳಿಗೆ ೧ ದಿನ<br>ಜ್ಞಾತಿಗಳಿಗೂ ೩ ದಿನ<br>ಜ್ಞಾತಿಗಳಿಗೆ ೧ ದಿನ |

| | | |
|---|---|---|
| ಉಪನಯನಾನಂತರ (೮ ವರ್ಷದ ನಂತರ) ಗಂಡು ಮಗು ಮೃತವಾದರೆ<br>ಹೆಣ್ಣುಮಗಳು ಋತುಮತಿಯಾಗಿ ವಿವಾಹಕ್ಕಿಂತ ಮೊದಲು ಸತ್ತರೆ | ತಂದೆತಾಯಿಯರಿಗೆ ೧೦ ದಿನ<br>ತಂದೆತಾಯಿಯರಿಗೆ ೧೦ ದಿನ<br>ಜನ್ಮಪೂರ್ತಿ ಅಶೌಚವೆಂಬ ಮಾತಿದೆ | ಜ್ಞಾತಿಗಳಿಗೆ ೧೦ ದಿನ<br>ಜ್ಞಾತಿಗಳಿಗೆ ೧೦ ದಿನ |
| ತಂದೆ, ತಾಯಿ ಮಲತಾಯಿಯರು ಮೃತರಾದಾಗ | ಗಂಡುಮಕ್ಕಳಿಗೆ ೧೦ ದಿನ ಗೋತ್ರಾಂತರಗೊಂಡು ದತ್ತು ಹೋದವರಿಗೆ ೩ ದಿನ ಗಂಡುಮಕ್ಕಳಿಗೆ ಸಪಿಂಡೀಕರಣಪರ್ಯಂತವೂ ಅಶೌಚ ಹೋಗುವುದಿಲ್ಲ | ಹೆಣ್ಣುಮಕ್ಕಳಿಗೆ ೩ ದಿನ (ತೌಳವ ಪದ್ಧತಿಯಲ್ಲಿ ೧೦ ದಿನ) ಸ್ತ್ರೀಯರಿಗೆ ೧೦ ದಿನ ಕಳೆದ ಮೇಲೆ ತಿಳಿದರೆ ಪಕ್ಷಿಣೀ |
| ಮಗ ಮೃತರಾದಾಗ | ತಂದೆ ತಾಯಿಗೆ ೧೦ ದಿನ ತಾನೇ ಕರ್ಮ ಮಾಡಿದರೆ ಸಪಿಂಡೀಕರಣಪರ್ಯಂತ | |
| ಮಗಳು (ವಿವಾಹಾನಂತರ ತಂದೆ–ತಾಯಿಯರ ಪ್ರತ್ಯಕ್ಷದಲ್ಲಿ ಮೃತಳಾದರೆ<br>ತಂದೆಯ ಪರೋಕ್ಷದಲ್ಲಿ ಮೃತಳಾದರೆ | ತಂದೆ ತಾಯಿಯರಿಗೆ ೩ ದಿನ<br>ತಂದೆತಾಯಿಯರಿಗೆ ಪಕ್ಷಿಣೀ; ಗಂಡನ ಮನೆಯಲ್ಲಿ ಮಗಳ ಮರಣದಲ್ಲೂ ತಂದೆ ತಾಯಿಗೆ ೩ ದಿನವೆಂಬ ಪಕ್ಷಾಂತರವಿದೆ. | ಅದೇ ಮನೆಯಲ್ಲಿರುವ ಚಿಕ್ಕಪ್ಪ ಮೊದಲಾದ ಜ್ಞಾತಿಗಳಿಗೆ ೧ ದಿನ |
| ಪಿತಾಮಹ (ತಂದೆಯ ತಂದೆ) ಪಿತಾಮಹೀ (ತಂದೆಯ ತಾಯಿ) | ಮೊಮ್ಮಗನಿಗೆ ೧೦ ದಿನ | ಮೊಮ್ಮಗಳಿಗೆ ೩ ದಿನ |
| ಪೌತ್ರ, (ಮಗನ ಮಗ) | ಪಿತಾಮಹ, ಪಿತಾಮಹಿಯರಿಗೆ ೧೦ ದಿನ | ಪೌತ್ರನಿಗೆ ೮ ವರ್ಷ ಮೀರಿದ್ದರೆ ಮಾತ್ರ ಅಶೌಚದಾಯಿತ್ವ |

| | | |
|---|---|---|
| ಪೌತ್ರಿ (ಮಗನ ಮಗಳು) | ಪಿತಾಮಹ, ಪಿತಾಮಹಿಯರಿಗೆ ಸ್ನಾನ | ಪೌತ್ರಿಗೆ ವಿವಾಹವಾಗಿದ್ದಾಗ |
| ಮಾತಾಮಹ (ತಾಯಿಯ ತಂದೆ) ಹಾಗೂ ಮಲತಾಯಿಯ ತಂದೆ | ಮೊಮ್ಮಗನಿಗೆ ೩ ದಿನ | ಮೊಮ್ಮಗಳಿಗೂ ೩ ದಿನ |
| ಮಾತಾಮಹಿ (ತಾಯಿಯ ತಾಯಿ) ಹಾಗೂ ಮಲತಾಯಿಯ ತಾಯಿ | ಮೊಮ್ಮಗನಿಗೆ ೩ ದಿನ (ತೌಳವ; ಪಕ್ಷಿಣೀ ಎಂಬ ಪಕ್ಷವೂ ಇದೆ | ಮೊಮ್ಮಗಳಿಗೆ·ಪಕ್ಷಿಣೀ; ೩ ದಿನ ಎಂಬ ಪಕ್ಷವೂ ಇದೆ (ತೌಳವ) |
| ದೌಹಿತ್ರ (ಮಗಳ ಮಗ) ಉಪನಯನವಾಗದಿದ್ದಾಗ | ಮಾತಾಮಹನಿಗೆ ೩ ದಿನ ಪಕ್ಷಿಣೀ | ಮಾತಾಮಹಿಗೆ ೩ ದಿನ ಪಕ್ಷಿಣೀ |
| ದೌಹಿತ್ರಿ (ಮಗಳ ಮಗಳು) | ಸ್ನಾನಮಾತ್ರ | ಸ್ನಾನಮಾತ್ರ |
| ಪತ್ನೀ<br>ಪತಿ | ಗಂಡನಿಗೆ ೧೦ ದಿನ<br>ಹೆಂಡತಿಗೆ ೧೦ ದಿನ | ತಾನೇ ಕರ್ತೃವಾದಾಗ ಸಪಿಂಡೀಕರಣಪರ್ಯಂತ. |
| ಪಿತೃವ್ಯ (ತಂದೆಯ ಸಹೋದರ) | ಗಂಡುಮಕ್ಕಳಿಗೆ ೧೦ ದಿನ | ಹೆಣ್ಣುಮಕ್ಕಳಿಗೆ ಪಕ್ಷಿಣೀ ಸ್ನಾನ ಮಾತ್ರವೆಂಬ ಪಕ್ಷವೂ ಇದೆ. |
| ಪಿತೃವ್ಯಪತ್ನಿ (ಚಿಕ್ಕಪ್ಪ, ದೊಡ್ಡಪ್ಪಂದಿರ ಪತ್ನಿಯರು) | ಗಂಡುಮಕ್ಕಳಿಗೆ ೧೦ ದಿನ | ಹೆಣ್ಣುಮಕ್ಕಳಿಗೆ ಸ್ನಾನ |
| ಪಿತೃವ್ಯಪುತ್ರ (ಚಿಕ್ಕಪ್ಪದೊಡ್ಡಪ್ಪಂದಿರ ಮಗ) | ಪುರುಷರಿಗೆ ೧೦ ದಿನ | ಸ್ತ್ರೀಯರಿಗೆ ಪಕ್ಷಿಣೀ |
| ಪಿತೃವ್ಯಪುತ್ರಿ (ಚಿಕ್ಕಪ್ಪದೊಡ್ಡಪ್ಪಂದಿರ ಮಗಳು) | ಪುರುಷರಿಗೆ ಪಕ್ಷಿಣೀ | ಸ್ನಾನಮಾತ್ರ |
| ಮಾತುಲ (ಸೋದರಮಾವ) | ಪುರುಷರಿಗೆ ೩ ದಿನ | ಸೋದರಸೊಸೆಗೆ ಪಕ್ಷಿಣೀ ೩ ದಿನವೆಂಬ ಮಾತೂ ಇದೆ |

| | | |
|---|---|---|
| ಉಪನಯನವಾಗದ ಮಾತುಲ; ಸಾಪತ್ನಮಾತುಲ (ಮಲತಾಯಿಯ ಸಹೋದರ) | ೧ ದಿನ<br>೧ ದಿನ | ೧ ದಿನ<br>೧ ದಿನ |
| ಮಾತುಲಾನೀ (ಸೋದರಮಾವನ ಹೆಂಡತಿ)<br>ಸಾಪತ್ನಿಮಾತುಲಪತ್ನೀ | ಪಕ್ಷಿಣೀ; ೩ ದಿನ (ತೌಳವಪಕ್ಷ)<br>ಸ್ನಾನಮಾತ್ರ | ಸ್ತ್ರೀಯರಿಗೆ ಪಕ್ಷಿಣೀ<br>ಸ್ನಾನಮಾತ್ರ |
| ಸೋದರಮಾವನ ಮಗ ಅನುಪನೀತನಾಗಿದ್ದರೆ | ಪುರುಷರಿಗೆ ಪಕ್ಷಿಣೀ ಒಂದು ದಿನ | ಸ್ತ್ರೀಯರಿಗೂ ಪಕ್ಷಿಣೀ ಒಂದು ದಿನ |
| ಅಣ್ಣತಮ್ಮಂದಿರು | ಪುರುಷರಿಗೆ ೧೦ ದಿನ | ವಿವಾಹಿತ ಅಕ್ಕತಂಗಿಯರಿಗೆ ೩ ದಿನ |
| ಅಕ್ಕತಂಗಿಯರು | ಅಣ್ಣತಮ್ಮಂದಿರಿಗೆ ೩ ದಿನ | ಅಕ್ಕತಂಗಿಯರಿಗೂ ೩ ದಿನ |
| ಮಾವ (ಶ್ವಶುರ)<br>ಅತ್ತೆ (ಶ್ವಶ್ರೂ) | ಅಳಿಯನಿಗೆ ೩ ದಿನ ಪತ್ನಿಮರಣಾನಂತರ ಪಕ್ಷಿಣೀ; ಪುನರ್ವಿವಾಹವಾಗಿದ್ದರೆ ೧ ದಿನ | ಅಳಿಯನ ಉಪಸ್ಥಿತಿಯಿಲ್ಲದಾಗ ಅತ್ತೆಮಾವಂದಿರ ಮರಣದಲ್ಲಿ ಅಳಿಯನಿಗೆ ಪಕ್ಷಿಣೀ ಎಂಬ ಪಕ್ಷವೂ ಇದೆ |
| ಅಳಿಯ (ಜಾಮಾತೃ) | ಅತ್ತೆಮಾವಂದಿರಿಗೆ ಸ್ನಾನಮಾತ್ರ | ಪ್ರತ್ಯಕ್ಷಮರಣವಾದರೆ ೧ ದಿನ |
| ಭಾವ, ಪತ್ನಿಯ ಅಣ್ಣತಮ್ಮ (ಸ್ಯಾಲಕ) | ಭಾವನಿಗೆ ೧ ದಿನ (ತೌಳವಾಚಾರ) ಸ್ನಾನವೆಂಬ ಪಕ್ಷವೂ ಇದೆ. ಪತ್ನೀಮರಣಾನಂತರ ಸ್ನಾನಮಾತ್ರ | ಈತನ ಪತ್ನಿಗೆ ಮಾತ್ರ ಸಹೋದರ ಮರಣಪ್ರಯುಕ್ತ ೩ ದಿನ |

| | | |
|---|---|---|
| ಭಾವನ ಮಗ (ಸ್ಯಾಲಕಪುತ್ರ) | ಸ್ನಾನಮಾತ್ರ | |
| ಪತ್ನಿಯ ಅಕ್ಕತಂಗಿ (ಸ್ಯಾಲಿಕಾ) | ಭಾವನಿಗೆ ಸ್ನಾನಮಾತ್ರ | ಸ್ನಾನವೂ ಬೇಕಾಗಿಲ್ಲವೆಂಬ ಪಕ್ಷ (ತೌಳವಾಚಾರ) |
| ಭಾವ (ಸಹೋದರಿಯ ಗಂಡ) | ಭಾವಮೈದುನರಿಗೆ ಸ್ನಾನಮಾತ್ರ | ನಾದಿನಿಯರಿಗೂ ಸ್ನಾನ ಮಾತ್ರ |
| ಸಹೋದರಿಯ ಮಗ (ಭಾಗಿನೇಯ)<br>ಸಹೋದರಿಯ ಮಗಳು ವಿವಾಹವಾಗಿದ್ದರೆ | ಸೋದರಮಾವನಿಗೂ, ಪತ್ನಿಗೂ ೩ ದಿನ<br>ಅಶೌಚವಿಲ್ಲ | ಚಿಕ್ಕಮ್ಮ ದೊಡ್ಡಮ್ಮಂದಿರಿಗೆ ಸ್ನಾನ ಮಾತ್ರ |
| ತಾಯಿಯ ಅಕ್ಕತಂಗಿಯರು (ಮಾತೃಭಗಿನೀ)<br>ಮಲತಾಯಿಯ ಅಕ್ಕತಂಗಿ | ಪುರುಷರಿಗೆ ೩ ದಿನ<br>ಪಕ್ಷಿಣೀ | ಸ್ತ್ರೀಯರಿಗೆ ೩ ದಿನ; ಪಕ್ಷಿಣೀ (ಘಟ್ಟದ ಮೇಲೆ)<br>ಪಕ್ಷಿಣೀ |
| ತಂದೆಯ ಅಕ್ಕತಂಗಿಯರು (ಸೋದರತ್ತೆ) (ಪಿತೃಭಗಿನೀ) | ಸೋದರಳಿಯನಿಗೂ; ಆತನ ಪತ್ನಿಗೂ ೩ ದಿನ | ವಿವಾಹಿತಸ್ತ್ರೀಗೆ ಪಕ್ಷಿಣೀ |
| ತಂದೆಯ ಮಲಸಹೋದರಿಯರು | ಸೋದರಳಿಯನಿಗೆ ಸ್ನಾನ ಮಾತ್ರ | ಸ್ನಾನಮಾತ್ರ |
| ಸೋದರತ್ತೆಯ ಗಂಡ | ಸ್ನಾನಮಾತ್ರ | ಸ್ನಾನಮಾತ್ರ |
| ಸೋದರತ್ತೆಯ ಮಗ, ತಾಯಿಯ ಅಕ್ಕತಂಗಿಯರ ಮಗ, ಸೋದರ ಮಾವನ ಮಗ (ಆತ್ಮಬಂಧುತ್ರಯ) | ಪುರುಷರಿಗೂ ಅವನ ಪತ್ನಿಗೂ ಪಕ್ಷಿಣೀ | ವಿವಾಹಿತಸ್ತ್ರೀಯರಿಗೂ ಈ ಮೂರು ಸಂಬಂಧದಲ್ಲಿ ಪಕ್ಷಿಣೀ |
| ತಂದೆಯ ಸೋದರತ್ತೆಯ ಮಗ, ತಂದೆಯ ಚಿಕ್ಕಪ್ಪ ದೊಡ್ಡಮ್ಮರ ಮಗ, ತಂದೆಯ ಸೋದರಮಾವನ ಮಗ (ಪಿತೃಬಂಧುತ್ರಯ) | ಪುರುಷರಿಗೂ ಅವರ ಪತ್ನಿಗೂ ಪಕ್ಷಿಣೀ; ೧ ದಿನ ಎಂಬ ಪಕ್ಷವೂ ಇದೆ (ತೌಳವ) | ವಿವಾಹಿತಸ್ತ್ರೀಯರಿಗೂ ಪಕ್ಷಿಣೀ. ಸ್ನಾನ ಮಾತ್ರ (ತೌಳವ) |

| | | |
|---|---|---|
| ತಾಯಿಯ ಸೋದರತ್ತೆಯ ಮಗ, ತಾಯಿಯ ಚಿಕ್ಕಮ್ಮ ದೊಡ್ಡಮ್ಮರ ಮಗ, ತಾಯಿಯ ಸೋದರಮಾವನ ಮಗ (ಮಾತೃಬಂಧುತ್ರಯ) | ೧ ದಿನ ಸ್ನಾನಮಾತ್ರವೆಂಬ ಪಕ್ಷವೂ ಇದೆ (ತೌಳವಾಚಾರ) | ೧ ದಿನ (ಘಟ್ಟದ ಮೇಲೆ) ಸ್ನಾನಮಾತ್ರ ಎಂಬುದು ತೌಳವಾಚಾರ |
| ತಂದೆಯ ಸೋದರಮಾವನ ಪತ್ನಿ, ತಾಯಿಯ ಸೋದರಮಾವನ ಪತ್ನಿ, ತಂದೆಯ ಸೋದರತ್ತೆಯ ಗಂಡ, ತಾಯಿಯ ಸೋದರತ್ತೆಯ ಗಂಡ | ಪುರುಷರಿಗೆ ಸ್ನಾನ ಮಾತ್ರ | ಸ್ತ್ರೀಯರಿಗೂ ಸ್ನಾನ ಮಾತ್ರ |
| ತಂದೆಯ ಚಿಕ್ಕಮ್ಮ ದೊಡ್ಡಮ್ಮಂದಿರ ಗಂಡ<br>ತಾಯಿಯ ಚಿಕ್ಕಮ್ಮ ದೊಡ್ಡಮ್ಮಂದಿರ ಗಂಡ | ಪುರುಷರಿಗೆ ಸ್ನಾನ ಮಾತ್ರ | ಸ್ತ್ರೀಯರಿಗೂ ಸ್ನಾನ ಮಾತ್ರ |
| ಭಿನ್ನಗೋತ್ರದ ದತ್ತು ಪಡೆದ ತಂದೆ ತಾಯಿಯರು ಮೃತರಾದಾಗ | ದತ್ತುಪುತ್ರನಿಗೆ ೩ ದಿನ ಮಾತ್ರ; | ದತ್ತುಪುತ್ರನಿಗೆ ಕರ್ಮಾಂಗ ಅಶೌಚ ಸಪಿಂಡೀಕರಣಪರ್ಯಂತ |
| ಭಿನ್ನಗೋತ್ರದ ದತ್ತುಪುತ್ರ ಮೃತನಾದಾಗ | ದತ್ತು ಪಡೆದ ತಂದೆ ತಾಯಿಯರಿಗೆ ೩ ದಿನ ಸಪಿಂಡರಿಗೆ ೧ ದಿನ | ಹೆತ್ತ ತಂದೆತಾಯಿಗೆ ೩ ದಿನ; ಸಪಿಂಡರಿಗೆ ೧ ದಿನ; ಕರ್ಮಾಂಗ ಅಶೌಚ ಸಪಿಂಡೀಕರಣಪರ್ಯಂತ |
| ದತ್ತಕನ ಪುತ್ರಾದಿಗಳ ಮರಣದಲ್ಲಿ | ದತ್ತು ಪಡೆದವ ಮತ್ತು ಕೊಟ್ಟವನಿಗೆ ೩ ದಿನ | ಸಪಿಂಡರಿಗೆ ೧ ದಿನ |
| ದತ್ತುಕೊಟ್ಟ ಮತ್ತು ಸ್ವೀಕರಿಸಿದವನ ಸಪಿಂಡರು ಮೃತರಾದಾಗ | ದತ್ತಕನಿಗೆ ೧ ದಿನ | ದತ್ತಕನ ಪತ್ನೀಸುತರರಿಗೂ ೧ ದಿನ |
| ಗುರುಗಳು (ಮಂತ್ರೋಪದೇಷ್ಟೃ, ಶಾಸ್ತ್ರಪಾಠವನ್ನು ಶಾಂತಿಪಾಠ ಹಾಕಿ ಹೇಳಿದವರು) | ಶಿಷ್ಯನಿಗೆ ೩ ದಿನ | ಶಿಷ್ಯಪತ್ನಿಗೆ ಸ್ನಾನ ಮಾತ್ರ |

| | | |
|---|---|---|
| ಅಂತೇವಾಸಿ (ತನ್ನ ಮನೆಯಲ್ಲಿದ್ದು ಶಾಸ್ತ್ರಪಾಠ ಕೇಳುತ್ತಿರುವವ) | ಗುರುವಿಗೆ ಪಕ್ಷಿಣೀ ತನ್ನಿಂದಲೇ ಉಪನೀತವಾದ ಶಿಷ್ಯನಾದರೆ ೩ ದಿನ | ಗುರುಪತ್ನಿಗೆ ಸ್ನಾನ ಮಾತ್ರ ಗುರುಪತ್ನಿಗೆ ಸ್ನಾನ ಮಾತ್ರ |
| ಆಚಾರ್ಯ (ಸ್ವಶಾಖೆಯನ್ನು ಪೂರ್ಣವಾಗಿ ಪಾಠ ಮಾಡಿದವನು) | ಶಿಷ್ಯನಿಗೆ ೩ ದಿನ | ಶಿಷ್ಯಪತ್ನಿಗೆ ಸ್ನಾನ ಮಾತ್ರ |
| ಗುರುಪತ್ನೀ, ಆಚಾರ್ಯಪತ್ನೀ, ಆಚಾರ್ಯಪುತ್ರ | ಶಿಷ್ಯನಿಗೆ ೧ ದಿನ; ೩ ದಿನವೆಂಬ ಪಕ್ಷವೂ ಇದೆ. | ಶಿಷ್ಯಪತ್ನಿಗೆ ಸ್ನಾನ ಮಾತ್ರ |
| ಉಪಾಧ್ಯಾಯ (ಏಕದೇಶಪಾಠಕ) | ಶಿಷ್ಯನಿಗೆ ಸ್ನಾನ | ಶಿಷ್ಯಪತ್ನಿಗೆ ಅಶೌಚವಿಲ್ಲ |
| ಋತ್ವಿಕ್ (ಕುಲಪುರೋಹಿತರು) | ಯಜಮಾನನಿಗೆ ೩ ದಿನ ೧ ದಿನವೆಂಬ ಪಕ್ಷ ತೌಳವಾಚಾರ. ಈ ಋತ್ವಿಜಾಶೌಚವು ತಾನು ಯಜ್ಞಕ್ಕೆ ವರಣ ಮಾಡಿ ಮಧ್ಯೆ ಋತ್ವಿಜರು ಮೃತರಾದಾಗ ಮಾತ್ರ; ಅನ್ಯತ್ರ ಸ್ನಾನಮಾತ್ರ. | |
| ಯಾಜ್ಯ (ಋತ್ವಿಜರಿಂದ ದೀಕ್ಷಿತನಾದ ಯಜಮಾನ) | ಋತ್ವಿಜರಿಗೆ ೩ ದಿನ (೧ ದಿನವೆಂಬುದು ತೌಳವಾಚಾರ); ಇದು ಕೂಡ ಋತ್ವಿಜರು ಯಾಗವನ್ನು ನಿರ್ಧರಿಸಿ, ಮೃತರಾಗಿದ್ದು ಈ ಮಧ್ಯೆ ಯಜಮಾನ ಮೃತನಾದರೆ ಮಾತ್ರ; ಅನ್ಯತ್ರ ಅಶೌಚವಿಲ್ಲ. | |

# ಗಯಾ ಕ್ಷೇತ್ರ ಹಾಗೂ ಬದರಿ ಶ್ರಾದ್ಧ ವಿಚಾರ

**-ಶ್ರೀರಾಮವಿಟ್ಠಲಾಚಾರ್ಯ**

ಸ್ವಗೃಹ ಎಂಬುದನ್ನು ಬಿಟ್ಟ ಮೇಲೆ ಅನೇಕ ತೀರ್ಥಕ್ಷೇತ್ರಗಳಲ್ಲಿ ಶ್ರಾದ್ಧ ಮಾಡಬಹುದು. ಅಂತಹುದರಲ್ಲಿ ಗಯಾ ಕ್ಷೇತ್ರವೂ ಉತ್ತಮ ಗತಿ ಕೊಡುತ್ತದೆ. ಗಯಾ ಕ್ಷೇತ್ರದಲ್ಲಿ ಮಾಡಿದ ಕಾರ್ಯಗಳು ಅಕ್ಷಯ ಫಲವನ್ನು ಕೊಡುತ್ತವೆ. ವಿಶೇಷವಾಗಿ ಪಿತೃಕಾರ್ಯವಂತೂ ಅಕ್ಷಯ ಫಲವನ್ನು ಕೊಡುತ್ತದೆ.

**''ಗಯಾಯಾಂ ಅಕ್ಷಯ ಶ್ರಾದ್ಧಂ ಜಪಹೋಮಂ ತಪಾಂಸಿ ಚ''**

(ಅಗ್ನಿಪುರಾಣ)

ಗಯಾ ಕ್ಷೇತ್ರದಲ್ಲಿ ಮಾಡಿದ ಜಪ ಹೋಮ ಶ್ರಾದ್ಧಾದಿಗಳು ಅಕ್ಷಯ ಫಲವನ್ನು ಕೊಡುತ್ತವೆ.

**''ಕಾಕ್ಷಂತಿ ಪಿತರಃ ಪುತ್ರಾನ್ ನರಕಾದಿಭಿಃ ಭೀರವಃ ।**
**ಗಯಾಂ ಯಾಸ್ಯತಿ ಯಃ ಪುತ್ರಃ ಸ ನಃ ತ್ರಾತಾ ಭವಿಷ್ಯತಿ ॥''**

ಅಗ್ನಿಪುರಾಣ 115-4

ನರಕಾದಿಗಳಿಂದ ಹೆದರಿದ ಪಿತೃಗಳು ನಮ್ಮ ಮಗನು ಗಯಾಕ್ಕೆ ಹೋಗುತ್ತಾನೆ. ಅವನು ಅಲ್ಲಿ ಶ್ರಾದ್ಧ ಮಾಡಿ ನಮ್ಮ ರಕ್ಷಕನಾಗುತ್ತಾನೆ ಎಂದು ಎದುರು ನೋಡುತ್ತಿರುತ್ತಾರೆ.

**ಏಷ್ಟವ್ಯಾ ಬಹವಃ ಪುತ್ರಾಃ ಯದ್ಯೇಕೋಽಪಿ ಗಯಾಂ ವ್ರಜೇತ್ ।**
**ಉದ್ಧರೇತ್ ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಂ ॥**

ವಾಯುಪುರಾಣ ೧೦೫-೨೦

**ವಾಯು ಪುರಾಣದಲ್ಲಿ ಗಯಾ ಮಹಿಮೆ**

ಬಹಳ ಮಕ್ಕಳನ್ನು ಪಡೆಯಬೇಕು. ಒಬ್ಬನಾದರೂ ಗಯಾಕ್ಕೆ ಹೋಗುತ್ತಾನೆ. ಒಬ್ಬನೇ ಹೋದರೂ ಏಳು ಗೋತ್ರಗಳನ್ನು ನೂರೊಂದು ಕುಲವನ್ನು ಉದ್ಧಾರ ಮಾಡುತ್ತಾನೆ. ಮಕ್ಕಳನ್ನು ಪಡೆಯುವುದು ಸದಾಚಾರ

ಸನ್ನಡತೆವುಳ್ಳವರಾಗಿ ಗಯಾದಿ ಕ್ಷೇತ್ರಕ್ಕೆ ಹೋಗಿ ಪಿತೃತೃಪ್ತಿಯನ್ನು ಮಾಡುವವ ನಾಗಲಿ ಎಂಬ ಉದ್ದೇಶದಿಂದಲೇ ಇರಬೇಕು. ಕೇವಲ ಲೌಕಿಕ ಸುಖದ ದೃಷ್ಟಿಯಿಂದಲ್ಲ ಎಂದು.

ಅನೇಕ ವಿಷಯಗಳಿಗೆ ಪ್ರಮಾಣಗಳು ನಮಗೆ ಪುರಾಣಗಳಿಂದ ದೊರೆಯುತ್ತವೆ. ಆದ್ದರಿಂದ ಪುರಾಣಗಳೂ ಆಧಾರ ಗ್ರಂಥಗಳೇ. ಅವುಗಳನ್ನು ಉದಾಸೀನ ಮಾಡಬಾರದು. ಪ್ರಕೃತ ವಾಯುಪುರಾಣದಲ್ಲಿ ಗಯಾ ಮಾಹಾತ್ಮ್ಯೆ ವರ್ಣಿತವಾಗಿರುವುದು ಹೀಗಿದೆ: ಒಂದು ಸಾರಿ ಭಕ್ತಶಿರೋಮಣಿ ಗಳಾದ ನಾರದರು ಶೌನಕಾದಿ ಮುನಿಗಳಿಂದ ಶ್ರೀ ಸನತ್ಕುಮಾರರಲ್ಲಿ ಹೋಗಿ ಅತ್ಯಂತ ನಮ್ರತೆಯಿಂದ ಪ್ರಾರ್ಥಿಸಿದರು.

''ಮಹಾತ್ಮರೇ, ತಾವು ನಮ್ಮ ಮೇಲಿನ ದಯೆಯಿಂದ ತೀರ್ಥ(ಕ್ಷೇತ್ರ) ಮಹಿಮೆ ಹೇಳಿ. ಯಾವ ತೀರ್ಥದಲ್ಲಿ ಕರ್ಮಾನುಷ್ಠಾನ ಮಾಡುವುದರಿಂದ ನಮಗೆ ಪುಣ್ಯಪ್ರಾಪ್ತಿಯಾಗಿ ನಮ್ಮ ಪಿತೃಗಳಿಗೆ ಮುಕ್ತಿಯಾಗುತ್ತದೆ ಅಂತಹ ತೀರ್ಥದ ಬಗ್ಗೆ ತಿಳಿಸಿರಿ''. ಆಗ ಸನತ್ಕುಮಾರರು ಹೇಳಿದರು.

ಭೂಮಂಡಲದಲ್ಲಿ ಅತ್ಯಂತ ಪವಿತ್ರವಾದ ಸ್ಥಾನ ಒಂದಿದೆ. ಅದನ್ನು ''ಗಯಾ ತೀರ್ಥ ಎಂದು ಕರೆಯುತ್ತಾರೆ. ಆ ಕ್ಷೇತ್ರದಲ್ಲಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧದಾನಾದಿಗಳನ್ನು ಮಾಡುವುದರಿಂದ ಪಿತೃದೇವತೆಗಳಿಗೆ ಅಕ್ಷಯ ಲೋಕ ಪ್ರಾಪ್ತವಾಗುತ್ತದೆ. ಅವರು ಸಂತುಷ್ಟರಾಗಿ ಆಯುರಾರೋಗ್ಯ ಐಶ್ವರ್ಯಾದಿ ಗಳನ್ನು ಕೊಡುತ್ತಾರೆ.

ನಾರದರು ಮತ್ತು ಋಷಿಗಳು ಕೇಳಿದರು ಏಕೆ ಆ ಗಯಾ ಕ್ಷೇತ್ರಕ್ಕೆ ಅಷ್ಟು ಮಹಿಮೆ? ಎಂದು, ಸನತ್ಕುಮಾರರು ಹೇಳಿದರು—

ಅತ್ಯಂತ ಪ್ರಾಚೀನ ಕಾಲದಲ್ಲಿ ಗಯಾಸುರನೆಂಬ ಒಬ್ಬ ದೈತ್ಯನಿದ್ದನು. ಇವನು ಕೋಲಾಹಲವೆಂಬ ಪರ್ವತದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿ ಬ್ರಹ್ಮನಿಂದ ಎರಡು ವರಗಳನ್ನು ಕೇಳಿದನು. ''ನಾನು ಮೂರು ಲೋಕದಲ್ಲಿದ್ದವರಿಗೆಲ್ಲರಿಗೂ ಮಹಾಪವಿತ್ರನಾಗಿರಬೇಕು ಮತ್ತು ನಾನು ಸ್ಪರ್ಶ ಮಾಡಿದ ವಸ್ತುಗಳು, ಜೀವಿಗಳು ಮುಕ್ತಿಗೆ ಹೋಗಲು ಯೋಗ್ಯವಾಗಬೇಕು''.

ಬ್ರಹ್ಮನು ಈ ಎರಡು ವರಗಳನ್ನು ಕೊಟ್ಟನು. ವರಗಳ ಪ್ರಕಾರ ಇವನನ್ನು ಮುಟ್ಟಿದವರೆಲ್ಲ ಮುಕ್ತಿಯೋಗ್ಯರಾಗುತ್ತಿದ್ದರು. ಇದರ ಪರಿಣಾಮದಿಂದ ಧರ್ಮ, ದಾನ, ಪಿತೃಕಾರ್ಯ ಎಲ್ಲ ಕಮ್ಮಿಯಾಗುತ್ತಾ ಬಂತು. ಏಕೆಂದರೆ ಇವನನ್ನೇ ಎಲ್ಲರೂ ಸ್ಪರ್ಶಿಸಿ ಮುಕ್ತಿಪದ ಪಡೆಯುತ್ತಿದ್ದರು. ಯಮಲೋಕ, ಸ್ವರ್ಗ, ನರಕ ಎಲ್ಲವೂ ಬಿಕೋ ಎನಿಸಿದವು. ಇದರಿಂದ ಪ್ರಕೃತಿಯ ನಿಯಮವೂ ಬದಲಾಯಿತು. ನಿತ್ಯ ಆಚರಣೆಯೂ ನಿಂತು ಹೋಯಿತು. ಎಲ್ಲಾ ದೇವತೆಗಳು ಬ್ರಹ್ಮನ ಸಮೀಪ ಹೋಗಿ ಪ್ರಾರ್ಥಿಸಿದರು. ದೇವತೆಗಳ ಸಹಿತ ಬ್ರಹ್ಮದೇವರು ಅನಾದಿಯಾದ ವಿಷ್ಣುವಿನ ಸಮೀಪಕ್ಕೆ ಹೋದರು. ವಿಷ್ಣುವನ್ನು ಪ್ರಾರ್ಥಿಸಿದರು. ಆ ವಿಷ್ಣುವು ದೇವತೆಗಳ ಹಾಗೂ ಬ್ರಹ್ಮದೇವರ ಪ್ರಾರ್ಥನೆಯನ್ನು ಕೇಳಿ ಹೇಳಿದನು, ನೀವು ಗಯಾಸುರನ ಸಮೀಪಕ್ಕೆ ಹೋಗಿ ಅವನ ಶರೀರವನ್ನೇ ಯಜ್ಞಕ್ಕಾಗಿ ಬೇಕೆಂದು ಕೇಳಿರಿ. ಹೀಗೆ ಸಮಾಧಾನ ಹೇಳಿ ಉಪಾಯವನ್ನು ತಿಳಿಸಿಕೊಟ್ಟನು.

ಶ್ರೀಭಗವಾನ್ ವಿಷ್ಣುವಿನ ಉಪಾಯವನ್ನು ಕೇಳಿದ ಬ್ರಹ್ಮಸಹಿತ ದೇವತೆಗಳೆಲ್ಲರೂ ಗಯಾಸುರನ ಸಮೀಪಕ್ಕೆ ಹೋದರು. ದೇವತೆಗಳಿಂದ ಸಹಿತನಾಗಿ ಬಂದಿರುವ ಬ್ರಹ್ಮನನ್ನು ಗಯಾಸುರನು ನೋಡಿ ಬಲು ಸಂತೋಷಪಟ್ಟ. ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ತಾವು ಬಂದಿರುವ ಕಾರಣವೇನು? ನನಗೆ ಯಾವ ಅನುಗ್ರಹ ಮಾಡಲು ಬಂದಿರುವಿರಿ? ಎಂದು ವಿನಮ್ರತೆಯಿಂದ ಕೇಳಿದನು. ಅದಕ್ಕೆ ಬ್ರಹ್ಮದೇವರು ಹೀಗೆ ಹೇಳಿದರು– ''ಹೇ ಗಯಾಸುರ, ಇಡೀ ಪ್ರಪಂಚದಲ್ಲಿ ನಾನು ಯಜ್ಞಕ್ಕೆ ಪವಿತ್ರವಾದ ಸ್ಥಳವನನು ಹುಡುಕಿದೆ. ಆದರೆ ನಿನ್ನ ಶರೀರದಷ್ಟು ಪವಿತ್ರವಾದ ಸ್ಥಳ ನನಗೆ ಮತ್ತೊಂದಿಲ್ಲವೆಂದು ತಿಳಿದು ಯಜ್ಞಕ್ಕಾಗಿ ನಿನ್ನ ಶರೀರವನ್ನು ಕೇಳಲು ಬಂದಿದ್ದೇನೆ'' ಎಂದರು. ಬ್ರಹ್ಮನು ಈ ಮಾತನ್ನು ಕೇಳುತ್ತಿರುವಾಗಲೇ ಗಯಾಸುರನು ನಾನು ಧನ್ಯ ಎಂದುಕೊಂಡು ತನ್ನ ಶರೀರವನ್ನು ಯಜ್ಞಕ್ಕಾಗಿ ಕೊಡಲು ಒಪ್ಪಿ ಉತ್ತರಕ್ಕೆ ತನ್ನ ತಲೆಯನ್ನು ಇಟ್ಟು ದಕ್ಷಿಣಕ್ಕೆ ತನ್ನ ಕಾಲುಗಳನ್ನು ಚಾಚಿ ಮಲಗಿದನು. ಅದು ಎಷ್ಟು ದೂರ ಹೋಯಿತೆಂದರೆ: ''ಪಂಚ ಕ್ರೋಶಂ

ಗಯಾ ಕ್ಷೇತ್ರಂ ಕ್ರೋಶಮ್ ಏಕಂ ಗಯಾ ಶಿರಃ'' (ಶ್ರಾದ್ಧವಿಧಿ) ೫ ಕ್ರೋಶದವರೆಗೆ ಕೈಕಾಲುಗಳು ಹಬ್ಬಿದವು. ಒಂದು ಕ್ರೋಶದವರೆಗೆ ತಲೆ ಮಾತ್ರ ಹಬ್ಬಿತು. ಅಂದರೆ ಸುಮಾರು ೨೦ ಮೈಲಿ ದೂರದವರೆಗೆ ಹಬ್ಬಿತ್ತು. ಆ ಶರೀರದ ಮೇಲೆಯೇ ಬ್ರಹ್ಮದೇವರು ಯಜ್ಞ ಪ್ರಾರಂಭಿಸಿದರು. ದರ್ಭೆಗಳನ್ನು ಅಭಿಮಂತ್ರಿಸಿ ಬ್ರಾಹ್ಮಣರನ್ನು ಸೃಷ್ಟಿಸಿದರು. ಆ ಸೃಷ್ಟಿಸಿದ ಬ್ರಾಹ್ಮಣರಿಗೆ ಯಜ್ಞಾದಿ ಕ್ರಿಯೆಗಳಿಗೆ ಅಧಿಕಾರವನ್ನು ಕೊಟ್ಟರು.

ಯಜ್ಞ ಪ್ರಾರಂಭವಾಯಿತು. ಗಯಾಸುರನ ದೇಹದ ಮೇಲೆ (ಎದೆ ಮೇಲೆ) ಯಜ್ಞ ಪ್ರಾರಂಭವಾದಾಗ ಗಯಾಸುರನು ಬಿಸಿ ತಾಳಲಾರದೆ ಅಲುಗಾಡಲು ಪ್ರಾರಂಭಿಸಿದನು. ಇದರಿಂದ ಯಜ್ಞದ ಪದಾರ್ಥಗಳು ಬೀಳಲಾರಂಭಿಸಿದವು. ಆಗ ಬ್ರಹ್ಮನು ಯಮಧರ್ಮರಾಜನಿಗೆ ಹೇಳಿದನು. ''ಹೇ ಧರ್ಮರಾಜ ನಿನ್ನಲ್ಲಿರುವ ದೇವಮಯವಾದ ಶಿಲಾ ಏನಿದೆ ಅದನ್ನು ಈ ದಾನವನ ಶರೀರದ ಮೇಲಿಡು. ಆಗ ಈ ಕಂಪನ ನಿಲ್ಲುತ್ತದೆ'' ಎಂದು. ಧರ್ಮರಾಜ ಹಾಗೆ ಮಾಡಿದ ಮೇಲೂ ಕಂಪನ ನಿಲ್ಲಲಿಲ್ಲ. ಅಲ್ಲಿದ್ದ ಎಲ್ಲಾ ದೇವತೆಗಳೂ ಒಟ್ಟಾಗಿ ತಮ್ಮ ಬಲವನ್ನೆಲ್ಲಾ ಹಾಕಿ ಒತ್ತಿ ಹಿಡಿದರು. ಆದರೂ ನಿಲ್ಲಲಿಲ್ಲ. ಆಗ ಹೇ ವಿಷ್ಣುವೇ ನೀನೇ ಗತಿ. ಯಜ್ಞ ಮುಗಿಯಬೇಕಿದ್ದರೆ ಈ ಕಂಪನ ನಿಲ್ಲಬೇಕು ಎಂದು ಪ್ರಾರ್ಥಿಸಿದರು. ಆಗ ಆ ದೇವತೆಗಳ ಈ ದೀನ ಅವಸ್ಥೆಯನ್ನು ಕಂಡು ಶ್ರೀವಿಷ್ಣುವು ತಾನೇ ಗದಾಧಾರೀ ರೂಪದಲ್ಲಿ ಧರ್ಮ ಶಿಲಾದ ಮೇಲೆ ಪ್ರಕಟನಾದನು. ಆಗ ಕಂಪನವೂ ಶಾಂತವಾಯಿತು. ಆಗ ಆ ಗದಾಧರನು ಪ್ರಸನ್ನನಾಗಿ ಗಯಾಸುರನಿಗೆ ವರ ಕೇಳಲು ಹೇಳಿದನು. ಗಯಾಸುರನು ಪ್ರಾರ್ಥಿಸಿದನು. ''ಹೇ ದೇವ, ತಮ್ಮ ಕೃಪೆಯಿಂದ ನಾನು ಕೃತಾರ್ಥನಾಗಿದ್ದೇನೆ. ತಾವು ನನ್ನ ಮೇಲೆ ಪ್ರಸನ್ನರಾಗಿದ್ದರೆ ಈ ಗದಾಧರ ರೂಪದಿಂದಲೇ ನನ್ನ ಶರೀರದ ಮೇಲೆ ಯಾವಾಗಲೂ ವಿರಾಜಿಸುತ್ತಿದ್ದು ನನ್ನನ್ನು ಪವಿತ್ರನನ್ನಾಗಿ ಮಾಡುತ್ತಾ ಇರುವುದು. ಅಲ್ಲದೆ ನನ್ನ ಶರೀರದ ಮೇಲೆ ಪಿತೃಕಾರ್ಯ ನಡೆಯಲು ನಿನ್ನ ಪಾದವಿಡು. ಪಿತೃಕಾರ್ಯಕ್ಕಾಗಿ ಈ ಸ್ಥಳ ಪ್ರಸಿದ್ಧವಾಗಲಿ. ಪಿತೃಗಳಿಗೆ ಅಕ್ಷಯವಾದ ತೃಪ್ತಿ ದೊರೆಯಲಿ. ಈ ನನ್ನ

ಶರೀರದ ಮೇಲಿರುವ ನಿನ್ನ ಪಾದಚಿಹ್ನೆ ಇರುವ ಧರ್ಮಶಿಲಾದ ಮೇಲೆ ಯಾರು ಪಿಂಡದಾನ ಮಾಡುತ್ತಾರೋ ಅವರ ಪಿತೃದೇವತೆಗಳಿಗೆ ಅಕ್ಷಯ ಲೋಕಪ್ರಾಪ್ತವಾಗಲಿ ಮತ್ತು ನಿತ್ಯಪಿತೃಕಾರ್ಯ ನಡೆಯುತ್ತಿರಲಿ'' ಎಂದು ವರವನ್ನು ಕೇಳಿದ್ದರಿಂದ ಇವತ್ತಿನವರೆಗೂ ಭಗವಂತ ಗದಾಧರನ ರೂಪದಿಂದ ಗಯಾ ಕ್ಷೇತ್ರದಲ್ಲಿದ್ದು ಆ ಸ್ಥಳ ವಿಷ್ಣುಪಾದ ಕ್ಷೇತ್ರವಾಗಿದ್ದು ಪಿತೃಗಳಿಗೆ ಮುಕ್ತಿಕೊಡುವ ಕೃಪಾ ಮಾಡುತ್ತಿದ್ದಾನೆ.

ಸನತ್ಕುಮಾರರು ಕಥೆಯನ್ನು ಮುಂದುವರೆಸಿ ಹೇಳಿದರು. ಬ್ರಹ್ಮದೇವನು ತಾನು ಮಾಡುತ್ತಿದ್ದ ಯಜ್ಞವನ್ನು ಪೂರ್ಣ ಮುಗಿಸಿದ ಮೇಲೆ ತನ್ನ ಮಾನಸ ಪುತ್ರರೆನಿಸಿದ್ದ ಅರ್ಥಾತ್ ಯಜ್ಞದ ಕಾರ್ಯಕ್ಕಾಗಿ ಸೃಷ್ಟರಾದ ಬ್ರಾಹ್ಮಣರನ್ನು ಉದ್ದೇಶಿಸಿ ಈ ಯಜ್ಞದಲ್ಲಿ ಬಂದಿರುವ ದೇವ ದುರ್ಲಭವಾದ ಧನ, ಧಾನ್ಯದಿಂದ ಈ ಭೂಮಿ ತುಂಬಿ ತುಳುಕುತ್ತಿತ್ತು. ಹಾಲು, ಮೊಸರು, ತುಪ್ಪ ಇವುಗಳ ನದಿಯೇ ಹರಿಯುತ್ತಿತ್ತು. ಬಂಗಾರ, ಬೆಳ್ಳಿಗಳ ಪರ್ವತವೇ ಕಾಣುತ್ತಿತ್ತು. ಅಂತಹ ಅಸದೃಶ ಸಂಪತ್ತು ತಮ್ಮೆದುರು ಇದ್ದರೂ ಸಹ ಯಾವುದೇ ಯಜ್ಞನಿಮಿತ್ತದಿಂದ ದಾನ ತೆಗೆದುಕೊಳ್ಳಬಾರದೆಂದು ತನ್ನಿಂದ ಸೃಷ್ಟರಾದ ಬ್ರಾಹ್ಮಣರಿಗೆ ಆಜ್ಞಾಪಿಸಿ ಅಂತರ್ಧಾನ ಹೊಂದಿದರು.

ಕೆಲವು ಕಾಲದ ನಂತರ ಧರ್ಮರಾಜನು ಒಂದು ಯಜ್ಞವನ್ನು ಪ್ರಾರಂಭಿಸಿದನು. ಯಜ್ಞದ ಪೂರ್ಣಫಲಪ್ರಾಪ್ತಿಗಾಗಿ ಬ್ರಾಹ್ಮಣರಿಗೆ ಬಂಗಾರವನ್ನು ದಾನ ಮಾಡಿದನು. ಬ್ರಹ್ಮ ಸೃಷ್ಟರಾದ ಈ ಬ್ರಾಹ್ಮಣರು ಅಜ್ಞಾನಮೋಹಿತರಾಗಿ ಈ ದಾನವನ್ನು ಸ್ವೀಕರಿಸಿದರು. ಇನ್ನೊಬ್ಬರಲ್ಲಿ ದಾನಕ್ಕಾಗಿ ಕೈಚಾಚಿದ್ದಕ್ಕೆ ಬ್ರಹ್ಮನು ಕೋಪಗೊಂಡು ನೀವೆಲ್ಲ ದರಿದ್ರರಾಗಿರಿ' ಎಂದು ಅವರಿಗೆ ಶಾಪಕೊಟ್ಟನು. ಕಾಲಾಂತರದಲ್ಲಿ ಆ ಎಲ್ಲಾ ಬಂಗಾರದ ರಾಶಿಗಳು ಶಿಲಾರೂಪ ಪರ್ವತಗಳಾಗಿ ಬಿದ್ದವು. ಭೂಮಂಡಲವೇ ಐಶ್ವರ್ಯಹೀನವಾಗಿ ಕಾಣುತ್ತಿತ್ತು. ಈ ಬ್ರಾಹ್ಮಣರು ತಮ್ಮ ತಪ್ಪಿಗಾಗಿ ಬಹಳ ಪಶ್ಚಾತ್ತಾಪ ಪಡುತ್ತಾ ಬಹುದೈನ್ಯದಿಂದ ಬ್ರಹ್ಮನನ್ನು ಪ್ರಾರ್ಥಿಸಿದರು. ಆಗ ಬ್ರಹ್ಮನು ಇವರ ಮೇಲೆ ದಯೆ ತೋರಿ ಈ ತೀರ್ಥದಲ್ಲಿ ನಡೆಯತಕ್ಕ ಪಿತೃ

ಯಜ್ಞಾದಿಗಳು ನೀವು ಸಂತುಷ್ಟರಾದ ಮೇಲೆಯೇ ಪೂರ್ತಿಯಾಗುತ್ತವೆ. ಆದ್ದರಿಂದ ಇಲ್ಲಿ ಪಿತೃಕಾರ್ಯ ಮಾಡುವವರು ನಿಮ್ಮನ್ನು ಗೌರವಿಸಬೇಕು. ಹಾಗೆ ಮಾಡಿದಾಗ ಮಾತ್ರ ಅವರ ಪಿತೃದೇವತೆಗಳಿಗೆ ತೃಪ್ತಿಯುಂಟಾಗುತ್ತದೆ ಎಂದು ಹೇಳಿ ಜನಗಳು ಸಂತುಷ್ಟರಾಗಿ ನಿಮಗೆ ದಾನಮಾಡುವರು. ನೀವು ಅವರ ಪಿತೃಗಳ ಮುಕ್ತಿಗಾಗಿ ತೃಪ್ತಿಯಾಗುವುದು. ಈ ರೀತಿ ನಿಮಗೆ ಜೀವನ ಸಾಧನವೂ ಆಗಿರುತ್ತದೆಂದು ವರವನ್ನು ಕೊಟ್ಟು ಅಂತರ್ಧಾನ ಹೊಂದಿದರು.

ಯಾವಾಗ ಗಯಾಸುರನ ಮೇಲೆ ಗದಾಧರ ಬಂದು ನಿಂತನೋ ಆಗ ಬ್ರಹ್ಮದೇವರು ದೇವತೆಗಳು ಸ್ತುತಿಸಿ ''ಹೇ ವಿಷ್ಣುವೇ ನೀವು ಇನ್ನು ಮುಂದೆ ಇಲ್ಲಿ ಸನ್ನಿಹಿತರಾಗಿರಬೇಕೆಂದು'' ಕೇಳಿಕೊಂಡರು. ಆಗ ಶ್ರೀವಿಷ್ಣುವು ಅವರನ್ನು ಕುರಿತು ಯಾವ ಮನುಷ್ಯನು ತನ್ನ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಪಿಂಡದಾನಾದಿ ಗಳನ್ನು ಇಲ್ಲಿಗೆ ಬಂದು ಮಾಡುತ್ತಾನೋ ಅವನ ಕುಲ ಉದ್ಧಾರವಾಗುತ್ತದೆ. ಏಳು ಕುಲಗಳು ಉದ್ಧಾರವಾಗುತ್ತವೆ.

ಹೇ ನಾರದ, ಈ ಪುಣ್ಯಭೂಮಿ ಮೇಲೆ ಯಾವ ವ್ಯಕ್ತಿ ತಿಲಯುಕ್ತ ಪಿಂಡದಾನ ಮಾಡುವನೋ ಅವನ ಪಿತೃಗಳ ಉದ್ಧಾರವಾಗುತ್ತದೆ. ಕಪ್ಪು ಎಳ್ಳಿನಿಂದ ತರ್ಪಣ ಕೊಡುವುದರಿಂದ ರಾಕ್ಷಸರ ಬಾಧೆಯಾಗುವುದಿಲ್ಲ.

ಗಯಾ ಕ್ಷೇತ್ರದಲ್ಲಿ ಪಿಂಡದಾನ ಮಾಡುವುದರಿಂದ ಅಶ್ವಮೇಧ ಯಜ್ಞದ ಫಲ ಪ್ರಾಪ್ತವಾಗುತ್ತದೆ. ಈ ಕ್ಷೇತ್ರದಲ್ಲಿ ಮಹಾಲಯದಲ್ಲಿ ಪಿಂಡದಾನ ಮಾಡುವುದರಿಂದ ಮಹಾಫಲ ಪ್ರಾಪ್ತವಾಗುತ್ತದೆ. ಪಿತೃಗಳಿಗೆ ದೀರ್ಘ ಕಾಲೀನವಾದ ತೃಪ್ತಿಯಾಗುತ್ತದೆ. ಪಿಂಡದಾನದ ನಿಮಿತ್ತ ಧನ, ಧಾನ್ಯ, ಪುತ್ರ, ಪೌತ್ರ ಸಂಪತ್ ಅಭಿವೃದ್ಧಿಯಾಗುತ್ತದೆ.

ಆಶ್ವೀಜ ಮಾಸದ ಕೃಷ್ಣಪಕ್ಷದಲ್ಲಿ ಪಿತೃಪಕ್ಷ (ನಮ್ಮ ದಕ್ಷಿಣ ದೇಶದ ಮಾಸಕ್ಕೂ ಉತ್ತರ ದೇಶದ ಮಾಸಕ್ಕೂ ಸ್ವಲ್ಪ ಹೆಚ್ಚು ಕಡಿಮೆ ಇರುವುದರಿಂದ ನಮ್ಮಲ್ಲಿ ಭಾದ್ರಪದ ಕೃಷ್ಣಪಕ್ಷದಲ್ಲಿ ಪಿತೃಪಕ್ಷವಾಗುತ್ತದೆ. ಉತ್ತರ ದೇಶದವರಿಗೆ ಆಶ್ವೀಜ ಮಾಸ ಕೃಷ್ಣಪಕ್ಷದಲ್ಲಿ ಪಿತೃಪಕ್ಷ.) ಬರುತ್ತದೆ. ಈ ಪಕ್ಷದ ಪ್ರತಿಯೊಂದು ತಿಥಿಯಲ್ಲೂ ತರ್ಪಣ ಪಿಂಡ ದಾನಾದಿಗಳು ವಿಹಿತವಾಗಿದೆ.

ಮೊದಮೊದಲು ಉತ್ತರೋತ್ತರ ಪ್ರಕಾರ ಶ್ರಾದ್ಧತ್ರೈಪಾಕ್ಷಿಕ ಹೇಳಿದ್ದಾರೆ. ಸಮಯವೇ ಇಲ್ಲದಿದ್ದರೆ ನಾಲ್ಕು ದಿನದ ಶ್ರಾದ್ಧ ಹೇಳಿದೆ. ಅದೂ ಆಗಲಿಲ್ಲವೆಂದರೆ ಮೂರು ದಿನಕ್ಕೆ ಹೇಳಿದ್ದಾರೆ. ಹೀಗೆ ಅಷ್ಟಗಯಾ, ಪಂಚಗಯಾ ಎಂದೆಲ್ಲ ಪ್ರಸಿದ್ಧಿಯಾಗಿದೆ. ಕೊನೇಪಕ್ಷ ಒಂದೇ ದಿನವಿದ್ದು ಶ್ರಾದ್ಧ ಮಾಡಿಕೊಂಡು ಬರಬಹುದು.

ಪ್ರಮುಖ ಸ್ಥಳಗಳಲ್ಲಿ ಕಾರ್ಯವನ್ನು ಮಾಡುವುದು. ಅಷ್ಟರಿಂದಲೇ ಪಿತೃಗಳಿಗೆ ತೃಪ್ತಿಯಾಗುತ್ತದೆ. ಅಲ್ಲಿಗೆ ಹೋದಾಗ ತಿಥಿ, ವಾರ, ನಕ್ಷತ್ರ, ರಾಹುಕಾಲ, ಗುಳಿಕಕಾಲ ಒಂದೂ ನೋಡುವುದೇ ಬೇಡ. ಆದರೆ, ಮಾಧ್ವರು ಏಕಾದಶಿ, ಗ್ರಹಣಾದಿಗಳನ್ನು ಒಂದನ್ನು ಬಿಟ್ಟು ಎಲ್ಲರೂ ಮಾಡುವಂತೆಯೇ ಮಾಡುವುದು. ಯಾವುದೇ ಕ್ಷೇತ್ರಕ್ಕೆ ಹೋಗಿದ್ದರೂ ಏಕಾದಶಿ ಶ್ರಾದ್ಧ ಮಾಡಬಾರದು. ಅದನ್ನು ಮಾರನೇ ದಿನಕ್ಕೆ ಹಾಕಿಕೊಳ್ಳಿ.

**ಪ್ರಮಾಣ : ಗಯಾಯಾಂ ಸರ್ವ ಕಾಲೇಷು ಪಿಂಡಂ ದದ್ಯಾತ್ ವಿಚಕ್ಷಣಃ ।**

### ಫಲ್ಗುಣೀ, ವಿಷ್ಣುಪಾದ, ಅಕ್ಷಯ ವಟದ ವಿಚಾರ

ಗಯಾದಲ್ಲಿದ್ದು ಮೂರು ದಿನ ಶ್ರಾದ್ಧ ಮಾಡಲಾಗಲಿಲ್ಲವೆಂದರೆ ಒಂದೇ ದಿನದಲ್ಲಿ ಶ್ರಾದ್ಧ ಮಾಡುವುದು ಅವಶ್ಯಕವಾಗಿದೆ. ಒಟ್ಟು ಪಿತೃಶಾಂತಿಯಾಗಲು ಏನು ಮಾಡಬೇಕೋ ಅದನ್ನು ಮಾಡುವುದು. ಕರ್ತೃವಿಗೂ ಅದರಿಂದ ಒಂದು ಉತ್ಕೃಷ್ಟವಾದ ಆನಂದ ಸಿಗುತ್ತದೆ. ಪ್ರಮುಖವಾದ ಆ ಮೂರು ಕ್ಷೇತ್ರಗಳು ೧ ಫಲ್ಗುತಟ, ೨ ವಿಷ್ಣುಪಾದ, ೩ ಅಕ್ಷಯವಟ ಶ್ರಾದ್ಧ.

### ಮೊದಲನೆಯದು ಫಲ್ಗುಣೀ ನದಿಯ ದಂಡೆ

ಈ ನದಿಯ ವಿಶೇಷತೆ ಎಂದರೆ ಮೇಲೆ ನೀರು ಕಾಣಿಸುವಂತೆ ಹರಿಯುವುದಿಲ್ಲ. ಆದರೆ ಅಂತಃಪ್ರವಾಹವಿದೆ. ಮೇಲೆ ಸ್ವಲ್ಪ ಮರಳನ್ನು ತೆಗೆದರೆ ನೀರು ಸಿಗುತ್ತದೆ. ಇದು ಬತ್ತಿಹೋದ ನದಿಯಲ್ಲ (ಬತ್ತಿಹೋದ ನದಿಯಲ್ಲಿ ಬಹಳ ಆಳದಲ್ಲಿ ನೀರು ಸಿಗುತ್ತದೆ) ಇಲ್ಲಿ ಹಾಗಲ್ಲ. ಸ್ವಲ್ಪ ತೋಡಿದಾಕ್ಷಣ ನೀರು ಸಿಗುತ್ತದೆ, ಮಳೆಗಾಲದಲ್ಲಿ ತುಂಬಿ ಹರಿಯುತ್ತಿರುತ್ತದೆ.

ಇದರ ಇನ್ನೊಂದು ವಿಶೇಷತೆ ಇದು ಉತ್ತರವಾಹಿನೀ ನದಿ. ಇಲ್ಲಿ ಕೃತಯುಗ ದಿಂದಲೂ ಋಷಿ, ಮುನಿ, ಜನರು, ದೇವತೆಗಳು ರೂಪಾಂತರದಿಂದ ಬಂದಾಗ ಸ್ನಾನ, ದಾನ, ಜಪ, ಶ್ರಾದ್ಧ, ಹೋಮಗಳನ್ನು ಮಾಡಿ ಶರೀರತ್ಯಾಗ ಮಾಡಿದ್ದು ಪುರಾಣಗಳಿಂದ ಕೇಳಿ ಬರುತ್ತದೆ. ಆದ್ದರಿಂದ ಪಿತೃಗಳ ತೃಪ್ತ್ಯರ್ಥವಾಗಿ ಇಲ್ಲಿ ಶ್ರಾದ್ಧ ಮಾಡಲೇಬೇಕು.

## ಎರಡನೆಯದು ಶ್ರೀ ವಿಷ್ಣುಪಾದ

ಆರಂಭದಲ್ಲಿ ಗಯಾಸುರನ ಕಥೆ ಓದಿರುವಿರಿ. ಎಲ್ಲಾ ದೇವತೆಗಳು ಆ ಗಯಾಸುರನ ಮೇಲೆ ಶಕ್ತಿ ಹಾಕಿ ಒತ್ತಿದಾಗ ತನ್ನ ದೇಹದ ಕಂಪನ ನಿಲ್ಲಿಸಲಿಲ್ಲ. ಆ ಪರಮಾತ್ಮನು ನೀನು ನನ್ನ ಭಕ್ತ ಎಂದು ತಿಳಿಸಲು ತನ್ನ ಬಲ ಪಾದವನ್ನು ಇಟ್ಟನು. ಆ ಪರಮಾತ್ಮನ ಕಾಲಿನಲ್ಲಿದ್ದ ಧ್ವಜ, ಅಂಕುಶ, ಚಕ್ರ, ಶಂಖ, ಕುಲಿಶ ಮುಂತಾದ ಮುದ್ರೆ ಚಿಹ್ನೆಗಳು ಹಾಗೆಯೇ ಮೂಡಿದವು. ಅಲ್ಲದೇ, ಗಯಾಸುರನು ಶ್ರೀವಿಷ್ಣುವಿನಿಂದ ಹೇ ದೇವ ಈ ನಿನ್ನ ಪಾದದ ಚಿಹ್ನೆ ಇರುವ ಜಾಗದಲ್ಲಿ ಅರ್ಥಾತ್ ವಿಷ್ಣು ಪಾದದ ಮೇಲೆಯೇ ಪಿತೃ ಪಿಂಡವನ್ನು ಹಾಕಬೇಕು ಎಂಬ ವರವನ್ನು ಕೇಳಿದನು. ಆದ್ದರಿಂದಲೇ ಆ ಪಾದಕ್ಕೆ ಶ್ರೀವಿಷ್ಣುಪಾದವೆಂದೇ ಹೆಸರು ಬಂದಿರುವುದು. ಶ್ರೀವಿಷ್ಣುಪಾದದ ಸುತ್ತಲೂ ಅಷ್ಟ ಕೋಣಾಕಾರವಾಗಿ (ಅಷ್ಟಮೂಲೆ) ಸಣ್ಣಕಟ್ಟೆ ಕಟ್ಟಿರುವರು. ಈ ಮಂದಿರದಲ್ಲಿ ಒಂದು ದೊಡ್ಡ ಸಭಾ ಭವನವೂ ಇರುವುದು. ಈ ಮಂದಿರದ ಶಿಖರವು ಬಹಳ ಉನ್ನತವಾಗಿದೆ. ಯಾತ್ರಿಕರು ಪಿಂಡದಾನ ಮಾಡುವವರು ಸುತ್ತಲೂ ಕುಳಿತು ಪಿಂಡದಾನ ಮಾಡಲು ಸರಿಯಾದ ಜಾಗ ವ್ಯವಸ್ಥೆ ಇರುವುದು. ಮಾಡದೆ ಇರುವ ಹೆಂಗಸರು ಮಕ್ಕಳು ಮುಂತಾದವರಿಗೆ ನೋಡಲೂ ಅವಕಾಶವಿದೆ.

## ಮೂರನೆಯದು ಅಕ್ಷಯ ವಟ

ಅಕ್ಷಯವಾದ (ಆಲದ ಮರ) ವಟವೃಕ್ಷ ಗಯಾದಲ್ಲಿ ಮಾಡುವ ಪಿತೃಕಾರ್ಯ ಕೊನೆಯದು. ಇಲ್ಲಿಯೇ ಈ ವೃಕ್ಷದ ಬುಡದಲ್ಲಿ ನೆರಳಲ್ಲಿ

ಮಾಡಿದ ಕಾರ್ಯಗಳು ಅಕ್ಷಯವಾಗುತ್ತವೆ. ಅಕ್ಷಯ ತೃತೀಯಾದಿನ ಇಲ್ಲಿ ಪಿತೃಕಾರ್ಯ ಮಾಡಿದರೆ ಇನ್ನೂ ವಿಶೇಷ. ಕೊನೆಯ ಶ್ರಾದ್ಧ ಮಾಡುವುದು ಇಲ್ಲಿಯೇ. ಆಗ ಅಲ್ಲಿನ ಗಯಾಪಾಲರು ನಿಮ್ಮ ಪಿತೃದೇವತೆಗಳು ಸಂತುಷ್ಟ ರಾಗಿದ್ದಾರೆಂದು ಹೇಳಲು ಬರುತ್ತಾರೆ. ಅವರಿಗೆ ಕರ್ತೃ ಧನ, ಧಾನ್ಯದಿಂದ ಸಂತೃಪ್ತಿಪಡಿಸಿದರೆ ಪಿತೃಗಳು ಮುಕ್ತರಾಗುವರೆಂದು ಬ್ರಹ್ಮದೇವರ ವರವಿರುವುದು. ಪಿತೃಗಳು ಹಾಗೂ ದೇವತೆಗಳು ಸಂತುಷ್ಟರಾಗುತ್ತಾರೆ.

ವೈದಿಕ ಧರ್ಮ ದೃಷ್ಟಿಕೋನದಲ್ಲೇ ಆಸಕ್ತರಾದ ಜ್ಞಾನಿಜನಗಳು ಶ್ರಾದ್ಧ ಎಂದರೇನು ಏತಕ್ಕಾಗಿ ಎಂದು ಅದರ ಪೂರ್ಣ ಪ್ರಯೋಜನ ತಿಳಿಯುತ್ತಾರೆ. ಶ್ರಾದ್ಧಾದಿ ಕಾರ್ಯ ಮಾಡುವುದರಿಂದಲೇ ಸಾಂಸಾರಿಕ ಬಾಧೆಗಳಿಂದ ಮುಕ್ತಿಯನ್ನು ಪಡೆಯುತ್ತಾರೆ. ಇಹಲೋಕದಲ್ಲಿ ಸುಖಸಂಪತ್ತನ್ನು ಪಡೆಯು ತ್ತಾರೆ ಎಂದು ಪುರಾಣಗಳು ತಿಳಿಸುತ್ತವೆ.

**ವಿಶೇಷ ಅನುಸಂಧಾನ**

೧. ವೇದೋಕ್ತಕರ್ಮಾನುಷ್ಠಾನದಲ್ಲಿ ಆಸಕ್ತಿವುಳ್ಳವರೇ ಕರ್ಮಗಳ ಫಲದ ಸುಮಧುರ ಆನಂದವನ್ನು ಅನುಭವಿಸುತ್ತಾರೆ.

೨. ಭಗವಂತನಲ್ಲಿ ಮಾಡುವ ನಿಷ್ಕಾಮ ಭಕ್ತಿಯೇ ಮುಕ್ತಿಮಾರ್ಗ ತೋರಿಸಲು ಸಮರ್ಥವಾಗುತ್ತದೆ.

೩. ನಿರ್ದೋಷವಾದ ವೈದಿಕ ಕರ್ಮಾನುಷ್ಠಾನವೇ ಭಕ್ತಿಕೊಡಲು ಸಮರ್ಥ ವಾಗುತ್ತದೆ.

೪. ಆದ್ದರಿಂದ ಮುಂದಿನ ಜನಾಂಗಕ್ಕೆ ಇದು ಅವಶ್ಯವಾಗಿ ತಿಳಿದಿರಬೇಕು. ವೈದಿಕ ಕರ್ಮಾನುಷ್ಠಾನದ ಬಗ್ಗೆ ಉದಾರ ಭಾವನಾ ಇರಬೇಕು.

೫. ಕರ್ಮಾನುಷ್ಠಾನ ಮಾಡುವುದೆಂದರೆ ಯಾವುದೋ ಕರ್ಮ ಮಾಡು ತ್ತಿರುವುದಲ್ಲ, ತನ್ನ ವರ್ಣ ಆಶ್ರಮಕ್ಕೆ ಉಚಿತವಾದ ಕರ್ಮಾನುಷ್ಠಾನ ದಿಂದಲೇ ಇರಬೇಕೆಂದು ವೇದವು ಉಪದೇಶಿಸುತ್ತದೆ.

# ಬದರೀ ಶ್ರಾದ್ಧ ಮಹಿಮೆ

**ಬ್ರಹ್ಮಕಪಾಲೇ ಪಿತರಃ ಪ್ರೇಕ್ಷಮಾಣಾಃ ಸ್ವವಂಶಜಮ್ ।**
**ತಿಷ್ಠಂತಿ ತಸ್ಮಾತ್ ಪಿಂಡಾನಾಂ ಪ್ರದಾನಂ ಮುನಯೋಽಬ್ರುವನ್ ॥**

ಬದರಿಯ ಬ್ರಹ್ಮಕಪಾಲದಲ್ಲಿ ಪಿತೃಗಳು ತಮ್ಮ ವಂಶದವರನ್ನು ನಿರೀಕ್ಷೆ ಮಾಡುತ್ತಾ ಇರುತ್ತಾರೆ. ಆದ್ದರಿಂದ ಅಲ್ಲಿ ಪಿಂಡಪ್ರದಾನ ಮಾಡಬೇಕೆಂದು ಮುನಿಗಳು ಹೇಳಿರುವರು.

**ಅಜ್ಞಾನಾದ್ ಜ್ಞಾನತೋ ವಾಪಿ ಭಕ್ತ್ಯಾಽಭಕ್ತ್ಯಾಽಥ ವಾ ಪುನಃ ।**
**ಯೈರತ್ರ ಪಿಂಡವಪನಂ ಕೃತಂ ಜಲಸುತರ್ಪಣಮ್ ॥**
**ತಾರಿತಾಃ ಪಿತರಸ್ತೇನ ದುರ್ಗತಾ ಅಪಿ ಪಾಪಿನಃ ।**

ತಿಳಿಯದೋ ಅಥವಾ ತಿಳಿದೋ ಭಕ್ತಿಯಿಂದಲೋ ಭಕ್ತಿಯಿಲ್ಲದೆಯೋ ಪಿಂಡ ಪ್ರದಾನ ಜಲತರ್ಪಣಗಳನ್ನು ಈ ಬದರಿಯ ಬ್ರಹ್ಮಕಪಾಲದಲ್ಲಿ ಮಾಡಿದರೆ ಅವರ ಪಿತೃಗಳು ಪಾಪಗಳನ್ನು ಮಾಡಿ ದುರ್ಗತಿಯನ್ನು ಹೊಂದಿದ್ದರೂ ಅವರು ಉದ್ಧಾರವಾಗುವರು.

**ಕಿಂ ಗಯಾಗಮನಾದ್ ದೇವಿ ಕಿಮನ್ಯತ್ ತೀರ್ಥತರ್ಪಣೈಃ ।**
**ಯೈರ್ನರೈಃ ಬ್ರಹ್ಮಕಪಾಲೇ ಪಿತೄನ್ ಉದ್ದಿಶ್ಯಭಾಮಿನಿ ।**
**ಕೃತಂ ತತ್ ಸರ್ವಮೇವಾಽಸೌ ಕೋಟಿಕೋಟಿ ಗುಣಂ ಭವೇತ್ ।**
**ತಸ್ಮಾತ್ ಸರ್ವಪ್ರಯತ್ನೇನ ಕುರ್ಯಾದ್ ಅತ್ರ ಸುತರ್ಪಣಮ್ ।**
**ಪಿಂಡಾನಾಂ ಪಾತನಂ ಚೈವ ಪಿತರೋ ಮುಕ್ತಿಮಾಪ್ನುಯುಃ ॥**

ಗಯಾದಲ್ಲಿ ಹೋಗಿ ಮಾಡಿದ ಶ್ರಾದ್ಧ, ಬೇರೆ ತೀರ್ಥಗಳಲ್ಲಿ ಕೊಟ್ಟ ತರ್ಪಣ ಬ್ರಹ್ಮಕಪಾಲದಲ್ಲಿ ತರ್ಪಣ ಪಿಂಡಪ್ರದಾನಗಳನ್ನು ಮಾಡಿದಾಗ ಪೂರ್ಣತೆಯನ್ನು ಪಡೆಯುತ್ತದೆ. ಇಲ್ಲಿ ತರ್ಪಣ ಪಿಂಡಪ್ರದಾನಗಳನ್ನು ಮಾಡಿದರೆ ಕೋಟಿಕೋಟಿ ಪಾಲು ಮಿಗಿಲು ಪುಣ್ಯ.

ಆದ್ದರಿಂದ ಸರ್ವಪ್ರಯತ್ನ ಮಾಡಿ ಬ್ರಹ್ಮಕಪಾಲದಲ್ಲಿ ತರ್ಪಣ ಪಿಂಡಪ್ರದಾನಗಳನ್ನು ಮಾಡಬೇಕು. ಪಿತೃಗಳು ಮುಕ್ತಿ ಸೇರುವರು.

**ಮಾತೃವಂಶ್ಯಾಶ್ಚ ಯೇ ಕೇಚಿತ್ ಪಿತೃವಂಶ್ಯಾಸ್ತಥಾ ಪರೇ ।**
**ಶ್ಯಾಲಾಃ ಸಂಬಂಧಿನೋ ವಾಽಪಿ ಸಖಾಯಶ್ಚಾಪಿ ಭಾಮಿನಿ ।**

**ಪ್ರಿಯಾಃ ವೃಷಾಃ ಪಕ್ಷಿಣಶ್ಚ ತಿರ್ಯಗ್ ಯೋನಿಗತಾ ಅಪಿ ।**
**ಗಚ್ಛಂತಿ ಪರಮಂ ಸ್ಥಾನಂ ತದ್ ವಿಷ್ಣೋಃ ಪರಮಂ ಪದಮ್ ॥**

ತಾಯಿ ವಂಶದವರು ಹಾಗು ಪಿತೃವಂಶದವರು, ಮೈದುನರು, ಬೇರೆ ಸಂಬಂಧಿಗಳು ಅಥವಾ ಗೆಳೆಯರು ಯಾರೇ ಪ್ರಿಯರಿರಲಿ ಅವರು ಮರಣ ಹೊಂದಿ ಮರಗಳೋ, ಪಕ್ಷಿಗಳೋ, ಪ್ರಾಣಿಗಳಾಗಿಯೇ ಹುಟ್ಟಿದ್ದರೂ ಆ ವಿಷ್ಣುವಿನ ಪರಮಪದವನ್ನು ಸೇರುವರು ಈ ಬ್ರಹ್ಮಕಪಾಲದಲ್ಲಿ ಮಾಡಿದ ಪಿಂಡಪ್ರದಾನ ಹಾಗು ತರ್ಪಣದಿಂದ.

**ಯಾನ್ ಉದ್ದಿಶ್ಯ ಚ ಸಲಿಲಂ ಪಿಂಡದಾನಂ ತಥೈವ ಚ ।**
**ಕೃತಂ ತೇ ವಿಷ್ಣುಲೋಕಾಯ ಗಚ್ಛಂತಿ ಸ್ಮರಣಾದಪಿ ॥**

ಯಾರನ್ನು ಉದ್ದೇಶಿಸಿ ಇಲ್ಲಿ ಜಲತರ್ಪಣ, ಪಿಂಡಪ್ರದಾನಗಳನ್ನು ಮಾಡಲಾಗುವುದೋ ಅವರು ವಿಷ್ಣುಲೋಕವನ್ನು ಸೇರುವರು. ಇಲ್ಲಿ ಸ್ಮರಿಸಿಕೊಂಡರೂ ಸಾಕು.

**ನಿತ್ಯಂ ಜಲ್ಪಂತಿ ಪಿತರಃ ಮದ್ವಂಶೇ ಕಶ್ಚಿದುತ್ತಮಃ ।**
**ಗಮಿಷ್ಯತಿ ವಿಶಾಲಾಯಾಂ ತಾರಿತಾಸ್ತೇನ ವೈ ವಯಮ್ ॥**

ಪಿತೃಗಳು ನಿತ್ಯವೂ ಹೀಗೆ ಹೇಳುತ್ತಾರೆ— ''ನಮ್ಮ ವಂಶದಲ್ಲಿ ಯಾರಾದರೂ ಉತ್ತಮ ಬದರೀ ವಿಶಾಲ ಕ್ಷೇತ್ರಕ್ಕೆ ಬಂದು ಶ್ರಾದ್ಧ ಮಾಡುವರೋ ಅವರಿಂದ ನಾವು ಉದ್ಧಾರವಾಗುತ್ತೇವೆ.''

**ಮಾಹಾತ್ಮ್ಯಂ ಕೇನ ಶಕ್ಯೇತ ವಕ್ತುಂ ವರ್ಷಶತೈರಪಿ ।**
**ಯತ್ರ ಗಂಗಾ ಮಹಾಭಾಗಾ ಬದರೀನಾಥಶೋಭಿತಾ ॥**

ಯಾವಕ್ಷೇತ್ರದಲ್ಲಿ ಬದರೀನಾಥನಿಂದ ಕಂಗೊಳಿಸುವ ಮಹಾಭಾಗ್ಯಶಾಲಿನಿ ಗಂಗೆಯು ಪ್ರವಹಿಸುವುದೋ ಆ ಕ್ಷೇತ್ರಮಾಹಾತ್ಮ್ಯವನ್ನು ನೂರಾರು ವರ್ಷಗಳಷ್ಟು ಕಾಲ ಹೇಳಿದರೂ ಪೂರೈಸಲಾಗುವುದಿಲ್ಲ.

**ಶ್ರೀಸ್ಕಾಂದ ಮಹಾಪುರಾಣದಲ್ಲಿ ಕೇದಾರಖಂಡದ ನಾಲ್ಕನೇ ಅಧ್ಯಾಯದ ಬದರೀಕ್ಷೇತ್ರ ಮಾಹಾತ್ಮ್ಯದಲ್ಲಿ ಶ್ರಾದ್ಧ ಮಹಿಮೆಯ ನಿರೂಪಣೆ ಹೀಗಿದೆ.**

# ಕಾಠಕೋಪನಿಷತ್ತು

ಋತಂ ಪಿಬಂತೌ ಸುಕೃತಸ್ಯ ಲೋಕೇ
ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ
ಛಾಯಾತಪೌ ಬ್ರಹ್ಮವಿದೋ ವದಂತಿ
ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ ॥ ೧ ॥

ಯಃ ಸೇತುರೀಜಾನಾನಾಂ ಅಕ್ಷರಂ ಬ್ರಹ್ಮ ತತ್ಪರಂ ।
ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಸಿ ॥ ೨ ॥

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ೩ ॥

ಇಂದ್ರಿಯಾಣಿ ಹಯಾನ್ಯಾಹುಃ
ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ
ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥

ಯಸ್ತ್ವವಿಜ್ಞಾನವಾನ್ ಭವತಿ ಅಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ ೫ ॥

ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ ೬ ॥

ಯಸ್ತ್ವವಿಜ್ಞಾನವಾನ್ ಭವತಿ ಅಮನಸ್ಕಃ ಸದಾಽಶುಚಿಃ ।
ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ ೭ ॥

ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ ೮ ॥

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ ೯ ॥

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ॥ ೧೦ ॥

ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಃ ಗತಿಃ ॥ ೧೧ ॥

ಏಷ ಸರ್ವೇಷು ಭೂತೇಷು ಗೂಢೋತ್ಮಾನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ ೧೨ ॥

ಯಚ್ಛೇದ್ವಾಙ್ಮನಸೀ ಪ್ರಾಜ್ಞಃ ತದ್ ಯಚ್ಛೇದ್ ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ತದ್ಯಚ್ಛೇಚ್ಛಾಂತ ಆತ್ಮನಿ ॥ ೧೩ ॥

ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಃ
ತತ್‌ಕವಯೋ ವದಂತಿ ॥ ೧೪ ॥

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾಽರಸಂ ನಿತ್ಯಮಗಂಧವಚ್ಚ ಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ ॥ ೧೫ ॥

ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಂ ।
ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥ ೧೬ ॥

ಯ ಇದಂ ಪರಮಂ ಗುಹ್ಯಂ ಶ್ರಾವಯೇದ್ ಬ್ರಹ್ಮಸಂಸದಿ ।
ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ
ತದಾನಂತ್ಯಾಯ ಕಲ್ಪತ ಇತಿ ॥ ೧೭ ॥

॥ ಇತಿ ಕಾಠಕೋಪನಿಷತ್ಸು ಪ್ರಥಮಾಧ್ಯಾಯಸ್ಯ ತೃತೀಯಾ ವಲ್ಲೀ ॥

**ಗೋವಿಂದಂ ಪುಂಡರೀಕಾಕ್ಷಂ ಗಂಗಾಂ ಕಾಶೀಂ ಗಯಾಂ ತಥಾ ।**
**ಗದಾಧರಂ ಸ್ಮರೇದ್ ಭಕ್ತ್ಯಾ ಶ್ರಾದ್ಧ ಷಾಡ್ಗುಣ್ಯ ಹೇತವೇ ॥**

ಶ್ರಾದ್ಧಕರ್ಮ ಪೂರ್ತಿಗಾಗಿ, ಗೋವಿಂದ, ಪುಂಡರೀಕಾಕ್ಷ, ಗದಾಧರ ರೂಪಗಳನ್ನು ಹಾಗೂ ಕಾಶಿ, ಗಯಾ, ಗಂಗಾದಿ ತೀರ್ಥಗಳನ್ನು ಭಕ್ತಿಯಿಂದ ಸ್ಮರಿಸಬೇಕು.

**ಶ್ರಾದ್ಧಾತ್ಪರತರನ್ನಾಸ್ತಿ ಶ್ರೇಯಸ್ಕರಮುದಾಹೃತಮ್ ।**
**ತಸ್ಮಾತ್ ಸರ್ವಪ್ರಯತ್ನೇನ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ॥**

ಮಾನವರಿಗೆ ತಮ್ಮ ಪಿತೃಗಳ ಶಾಸ್ತ್ರೋಕ್ತವಾದ ಶ್ರಾದ್ಧಕರ್ಮಕ್ಕಿಂತ ಶ್ರೇಯಸ್ಕರವಾದ ಕಾರ್ಯವು ಯಾವುದೂ ಇಲ್ಲ. ಆದ್ದರಿಂದ ವಿವೇಕಿಗಳು, ಜ್ಞಾನಿಗಳು ಸರ್ವ ಪ್ರಯತ್ನದಿಂದ ಶ್ರಾದ್ಧವನ್ನು ಮಾಡಬೇಕು.

**ಯೇ ಯಜಂತಿ ಪಿತೄನ್ ದೇವಾನ್ ಬ್ರಾಹ್ಮಣಾಃ ಸರ್ವಕಾಮದಾನ್ ।**
**ಸರ್ವಭೂತಾಂತರಾತ್ಮಾನಂ ವಿಷ್ಣುಮೇವ ಯಜಂತಿ ತೇ ॥**

ಯಾವ ಬ್ರಾಹ್ಮಣರು ಎಲ್ಲ ಇಷ್ಟಾರ್ಥವನ್ನು ಕೊಡುವವರಾದ ಪಿತೃಗಳನ್ನು ದೇವತೆಗಳನ್ನು ಪೂಜಿಸುವರೋ ಅವರು ಎಲ್ಲಾ ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ನಿಯಾಮಕನಾದ ವಿಷ್ಣುವನ್ನೇ ಪೂಜಿಸುತ್ತಾರೆ.